# ಇಂಗ್ಲಿಷ್-ಕನ್ನಡ ಸಂಬಂಧ ಕುರಿತ ಚಿಂತನೆಗಳು

ಎಂ. ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು
ಸಿದ್ಧಪಡಿಸಿದ ಪ್ರೌಢಪ್ರಬಂಧ

ನಾರಾಯಣ. ಡಿ. ಎಸ್.

ಮಾರ್ಗದರ್ಶಕರು
ಪ್ರೊ. ಓ. ಎಲ್. ನಾಗಭೂಷಣಸ್ವಾಮಿ

ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ,
ಕಾಮಲಾಪುರ - ೫೮೩ ೨೨೧.

೧೯೯೪

# ಇಂಗ್ಲಿಷ್-ಕನ್ನಡ ಸಂಬಂಧ ಕುರಿತ ಚಿಂತನೆಗಳು

ಎಂ. ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು
ಸಿದ್ಧಪಡಿಸಿದ ಪ್ರೌಢಪ್ರಬಂಧ



ನಾರಾಯಣ. ಡಿ. ಎಸ್.

ಮಾರ್ಗದರ್ಶಕರು
ಪ್ರೊ. ಓ. ಎಲ್. ನಾಗಭೂಷಣಸ್ವಾಮಿ




ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ,
ಕಾಮಲಾಪುರ - ೫೮೩ ೨೨೧.

೧೯೯೪



## ದೃಢೀಕರಣ ಪತ್ರ

1993–94 ನೇ ಸಾಲಿನ ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಶ್ರೀ ನಾರಾಯಣ ಡಿ.ಎಸ್. ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ''ಇಂಗ್ಲಿಷ್ – ಕನ್ನಡ ಸಂಬಂಧ ಕುರಿತ ಚಿಂತನೆಗಳು'' ಎಂಬ ಪ್ರೌಢಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 19-10-1994

( ಪ್ರೊ. ಓ.ಎಲ್.ನಾಗಭೂಷಣಸ್ವಾಮಿ )

## ಪ್ರಮಾಣ ಪತ್ರ

1993–94 ನೇ ಸಾಲಿನ ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಪ್ರೊ. ಓ.ಎಲ್. ನಾಗಭೂಷಣಸ್ವಾಮಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾದ "ಇಂಗ್ಲಿಷ್ – ಕನ್ನಡ ಸಂಬಂಧ ಕುರಿತ ಚಿಂತನೆಗಳು" ಎಂಬ ಈ ಪ್ರೌಢಪ್ರಬಂಧವನ್ನು ಇದಕ್ಕೆ ಮೊದಲು ಯಾವುದೇ ಪದವಿಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ.

ದಿನಾಂಕ : 19-10-1994

D.S.Naga...

( ನಾರಾಯಣ. ಡಿ.ಎಸ್. )

# ಕೃತಜ್ಞತೆಗಳು

ಎಂ.ಫಿಲ್. ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಆಡಳಿತವರ್ಗಕ್ಕೆ.

ಮಾರ್ಗದರ್ಶಕರಾಗಿ ತಿದ್ದಿದ ಪ್ರೊ. ಓ.ಎಲ್. ನಾಗಭೂಷಣಸ್ವಾಮಿಯವರಿಗೆ.

ಎಂ.ಫಿಲ್. ತರಗತಿಗಳಲ್ಲಿ ಸಂಶೋಧನೆಯ ಮೊದಲ ಪಾಠಗಳನ್ನು ಹೇಳಿ ತಳಹದಿ ಹಾಕಿಕೊಟ್ಟ ಗುರುಗಳಾದ ಡಾ. ಕೆ.ವಿ. ನಾರಾಯಣ, ಪ್ರೊ. ಎಚ್.ಎಸ್. ರಾಘವೇಂದ್ರರಾವ್, ಕಿ.ರಂ. ನಾಗರಾಜ ಹಾಗೂ ಡಾ. ಪುರುಷೋತ್ತಮ ಬಿಳಿಮಲೆಯವರಿಗೆ.

ಅಧ್ಯಯನಕ್ಕೆ ನೆರವಾದ ಎಲ್ಲ ಅಧ್ಯಾಪಕರುಗಳಿಗೆ.

ಪ್ರಬಂಧ ರಚನೆಯ ವೇಳೆಯಲ್ಲಿ ಸಲಹೆಗಳನ್ನಿತ್ತ, ವಿಷಯದ ಕುರಿತು ಚರ್ಚಿಸಿದ ಡಾ. ಮೋಹನ್ ಕುಂಟಾರ್ ಹಾಗೂ ಡಾ. ಸುಬ್ಬಣ್ಣ ರೈಯವರಿಗೆ.

ಅಗತ್ಯವಿದ್ದ ಪುಸ್ತಕಗಳನ್ನು ಒದಗಿಸಿದ ಪ್ರೊ. ಲಕ್ಷ್ಮಣ್ ತೆಲಗಾವಿ, ಧನ್ಯಕುಮಾರ ಬಿಣಜಗಿ, ಸುಜ್ಞಾನಮೂರ್ತಿ, ವಿಠ್ಠಲರಾವ್ ಗಾಯಕವಾಡ್, ಚೆ.ರಾ. ಗೋವಿಂದರಾಜು ಅವರಿಗೆ.

ಜೊತೆಗಿದ್ದು ಜೊತೆಜೊತೆಗೇ ನಲಿದು ಅಧ್ಯಯನಕ್ಕೆ ಸ್ಫೂರ್ತಿ ನೀಡಿದ ಸಹಪಾಠಿಗಳಿಗೆ.

ಬೆರಳಚ್ಚು ಮಾಡಿಕೊಟ್ಟ ಕು. ರಜನಿಗೆ.

ಹಲವು ರೀತಿಯಲ್ಲಿ ಸಹಾಯ ಮಾಡಿದ ಎಲ್ಲ ಆತ್ಮೀಯರಿಗೆ.

— ತುಂಬು ಹೃದಯದ ಕೃತಜ್ಞತೆಗಳು.

ನಾರಾಯಣ. ಡಿ.ಎಸ್.

# ಅನುಕ್ರಮಣಿಕೆ

## ಅಧ್ಯಾಯ 1: ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

ಈ ಅಧ್ಯಯನವನ್ನು ಕನ್ನಡ ಭಾಷೆಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ನಡೆಸಲಾಗಿದೆ. ಅಂದರೆ, ಇಂಗ್ಲಿಷ್ – ಕನ್ನಡ ಸಂಬಂಧದ ಕುರಿತು ನಡೆದ ಚಿಂತನೆಗಳಲ್ಲಿ ಕನ್ನಡ ಭಾಷೆಯ ಬೆಳವಣಿಗೆ, ಅದರ ರಕ್ಷಣೆ ಹಾಗೂ ಅದರ ಅಸ್ತಿತ್ವ – ಈ ಮೂರರ ಅನಿವಾರ್ಯತೆಯ ಕುರಿತು ವ್ಯಕ್ತಪಡಿಸಲಾದ ತಾತ್ವಿಕ ನಿಲುವುಗಳಿಗೆ ಒತ್ತು ನೀಡಲಾಗಿದೆ. ಇಲ್ಲಿ ಸಹಜವಾಗಿಯೇ ಪ್ರಾದೇಶಿಕ ಉಪಭಾಷೆ ಹಾಗೂ ಕನ್ನಡದ ನಡುವಿನ ಸಮಸ್ಯೆ, ಕನ್ನಡ – ಹಿಂದೀ ಸಮಸ್ಯೆ, ಸೋದರ ಭಾಷೆಗಳ ಸಮಸ್ಯೆ, ಗಡಿ ವಿವಾದ, ಇನ್ನಿತರ ಭಾಷಾಸಮಸ್ಯೆಗಳು ಬರುತ್ತವೆ. ಆದರೆ, ಕನ್ನಡ ಭಾಷೆಯ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವ ಮತ್ತು ಅದಕ್ಕೆ ಪರಿಹಾರ ಮಾರ್ಗಗಳನ್ನು ಸೂಚಿಸುವ ಪ್ರಧಾನ ಚಿಂತನೆಗಳನ್ನು ಮಾತ್ರ ಇಲ್ಲಿ ಅಧ್ಯಯನಕ್ಕಾಗಿ ಬಳಸಿಕೊಳ್ಳಲಾಗಿದೆ. 1947 ರಿಂದ ನಂತರ ಬಂದ ಚಿಂತನೆಗಳಿಗೆ ಇಲ್ಲಿ ಪ್ರಾಧಾನ್ಯ ನೀಡಿದೆ. ಬೇರೆ ಬೇರೆ ಚಿಂತನೆಗಳ ಆಮೂಲಾಗ್ರ ಸಮೀಕ್ಷೆ ಹಾಗೂ ಅಧ್ಯಯನ ಇಲ್ಲಿನ ಉದ್ದೇಶವಲ್ಲ; ಕನ್ನಡ ಭಾಷೆಯ ಬೆಳವಣಿಗೆಗೆ ಸವಾಲಾಗಿ ನಿಂತಿರುವ – ಆದರೆ ಅನಿವಾರ್ಯವಾಗಿ ಸಂಬಂಧ ಬೆಸೆಯುತ್ತಿರುವ – ಇಂಗ್ಲಿಷ್ ಭಾಷೆಯ ಕುರಿತು ಕನ್ನಡಿಗರು ಬೆಳೆಸಿಕೊಳ್ಳಬೇಕಾದ ಧೋರಣೆಯೇನು, ಯಾವ ಧೋರಣೆ ಯಾವ ಕಾರಣಕ್ಕಾಗಿ; ಹಾಗೂ ಅದರ ಉಪಯುಕ್ತತೆಯೇನು – ಇವುಗಳನ್ನು ಕಂಡುಕೊಳ್ಳಲು ಅನುಕೂಲವಾಗುವಷ್ಟು ಆಕರ ಸಾಮಗ್ರಿಗಳನ್ನು ಮಾತ್ರ ಇಲ್ಲಿ ಬಳಸಿಕೊಳ್ಳಲಾಗಿದೆ.

ಹೀಗೆ ಬಳಸಿಕೊಂಡ ಆಕರಗಳು ಹಲವು ರೀತಿಯವು. ಪತ್ರಿಕೆಗಳು, ವೈಚಾರಿಕ ಗ್ರಂಥಗಳು, ಸಂಕಲನಗಳು, ಭಾಷಾಸಮಸ್ಯೆಗಳ ಕುರಿತ ಚಿಂತನೆಗಳೇ ವಿಷಯವಾಗಿರುವ ಗ್ರಂಥಗಳು – ಹೀಗೆ ಹಲವು ಕಡೆ ಇಂಗ್ಲಿಷ್ – ಕನ್ನಡ ಸಂಬಂಧ ಕುರಿತ ಸಮಸ್ಯೆಗೆ ಮತ್ತು ಚಿಂತನೆಗೆ ನಾನಾ ಮುಖಗಳಿರುವುದರಿಂದ, ಅದು ಮುಂದುವರಿಯುತ್ತಲೇ ಬಂದಿರುವುದರಿಂದ, ಈ ಬರಹಗಳೂ ನಿರಂತರವಾಗಿ ಬರುತ್ತಿವೆ. ಇವೆಲ್ಲವನ್ನೂ ಸಮೀಕ್ಷೆ ಮಾಡಿ ಅಧ್ಯಯನ ಮಾಡುವುದು ತುಂಬ ವ್ಯಾಪಕವಾದ ಕೆಲಸವಾಗಬಹುದಾದ್ದರಿಂದ ಇಲ್ಲಿ ಕೆಲವು ಮಿತಿಗಳನ್ನು ಹಾಕಿಕೊಳ್ಳುವುದು ಅನಿವಾರ್ಯವಾಗಿದೆ. ಚಿಂತಕರು ಹಾಗೂ ಅವರ ಚಿಂತನೆಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಗಮನಿಸುವುದಕ್ಕಿಂತ, ಅವರ ಚಿಂತನೆಗಳನ್ನು ಒಟ್ಟೊಟ್ಟಿಗೆ ಗಮನಿಸಿ, ಅವುಗಳಲ್ಲಿ ಕಂಡುಬರುವ

ಸಮಾನ ಅಂಶಗಳನ್ನು, ವಿಶಿಷ್ಟತೆಗಳನ್ನು ಆಧಾರವಾಗಿಟ್ಟುಕೊಂಡು ಕೆಲವೊಂದು ವಿಭಾಗ
ಗಳನ್ನು ಮಾಡಿಕೊಳ್ಳಲಾಗಿದೆ. ಆಂತಹ ವಿಭಾಗಗಳಲ್ಲಿ ಕೆಲವು ಚಿಂತನೆಗಳ ಪ್ರತ್ಯೇಕತೆ
ಯನ್ನು ಪರಿಶೀಲಿಸಲು ಇಲ್ಲಿ ಯತ್ನಿಸಲಾಗಿದೆ. ಚಿಂತನೆಯ ಪರಿಧಿ ತೀರ ವಿಸ್ತಾರವಾಗಿರು
ವಲ್ಲಿ ವ್ಯಕ್ತಿಗಳ ಚಿಂತನೆಗಳನ್ನು ಬಿಡಿಬಿಡಿಯಾಗಿ ನೋಡದೆ, ಚಿಂತನೆಯ ಮುಖ್ಯ ಧಾರೆ
ಗಳನ್ನು ಮಾತ್ರ ಗಮನಿಸಿ, ಒಟ್ಟು ಅಭಿಪ್ರಾಯಗಳನ್ನು ಸಂಗ್ರಹಗೊಳಿಸಿ ಹೇಳಲಾಗಿದೆ.

## ಅಧ್ಯಾಯ 2: ಭಾಷಾಸಮಸ್ಯೆಗಳು ಮತ್ತು ಭಾಷೆಗಳೊಳಗಿನ ಸಂಬಂಧ

### ಪ್ರಸ್ತುತತೆ :

ಒಂದು ಭಾಷೆ ಜೀವಂತವಾಗಿರುವವರೆಗೂ ಅದನ್ನು ಕುರಿತು ಚಿಂತಿಸುವುದು, ಅದಕ್ಕೆ ಎದುರಾಗಬಹುದಾದ ಸಮಸ್ಯೆಗಳ ಬಗೆಗೆ ಎಚ್ಚರವಾಗಿರುವುದು ಅತ್ಯಂತ ಸಹಜ. ಹಾಗಿಲ್ಲದಿದ್ದರೆ, ಆ ಭಾಷೆ ಸಮಸ್ಯೆಗಳಲ್ಲಿ ಸಿಕ್ಕಿಹಾಕಿಕೊಂಡು ನರಳಬೇಕಾಗುತ್ತದೆ; ವಿನಾಶವನ್ನು ಕಾಣಬೇಕಾಗುತ್ತದೆ. ಕನ್ನಡ ಭಾಷೆಯ ಕುರಿತು ಹೇಳುವುದಾದರೆ, ಅದು ಇಂದಿಗೂ ಜೀವಂತವಾಗಿರುವುದು ಹೀಗೆ ಚಿಂತಿಸುತ್ತಲೇ ಬಂದಿರುವುದರಿಂದ, ಸಕಾಲಿಕವಾಗಿ ಎಚ್ಚೆತ್ತಿರುವುದರಿಂದ. ಆದರೆ ಇಷ್ಟರಿಂದಲೇ ಅದು ತನ್ನ ಸಮಸ್ಯೆಗಳನ್ನು ಎದುರಿಸಿಕೊಂಡು ಹೋಗುವ ಸಾಮರ್ಥ್ಯ ಹೊಂದಿದೆ ಎಂದು ನಿರ್ಭೀತಿಯಿಂದಿರುವುದೂ ಸಾಧ್ಯವಿಲ್ಲ. ಕೆ.ವಿ. ನಾರಾಯಣ ಅವರು ಹೇಳುವಂತೆ, '' ಆದರೆ ಅದೇ ಸಾಧ್ಯತೆ ( ' ಆತಂಕಕ್ಕೆ ಕಾರಣವಿಲ್ಲ. ಇಂಥ ಎಷ್ಟೋ ಇಕ್ಕಟ್ಟುಗಳನ್ನು ಕನ್ನಡ ಗೆದ್ದು ಬಂದಿದೆ ಹಾಗೂ ಮುಂದೆಯೂ ಗೆದ್ದು ನಿಲ್ಲುತ್ತದೆ ' ಎಂಬ ಸಾಧ್ಯತೆ) ಇಂಗ್ಲಿಷಿನ ಸಂದರ್ಭದಲ್ಲೂ ನಡೆಯುತ್ತದೆ ಎನ್ನುವಂತಿಲ್ಲ. ಇಂಗ್ಲಿಷಿಗೆ ಇರುವ ಆಧುನಿಕ ಹಾಗೂ ವೈಜ್ಞಾನಿಕ ಒತ್ತಾಸೆಗಳು ಕನ್ನಡಕ್ಕೆ ಎದುರಾದ ಮತ್ತಾವ ಭಾಷೆಗೂ ಇರಲಿಲ್ಲ.''[1]

ಇಂದು ಕರ್ನಾಟಕದಲ್ಲಿರುವ ಭಾಷಾಸಮಸ್ಯೆ ಗಂಭೀರ ಸ್ವರೂಪದ್ದಾಗಿದೆ. ಇಲ್ಲಿ ಹಲವು ಸಮಸ್ಯೆಗಳು ಪರಸ್ಪರ ಹೆಣೆದುಕೊಂಡಿವೆ. ಒಂದರ ಪರಿಹಾರಕ್ಕೆ ಇನ್ನೊಂದು ಅಡಚಣೆಯಾಗಿ ನಿಲ್ಲುತ್ತದೆ. ಸಾಮಾಜಿಕ ಏರುಪೇರು, ರಾಜಕೀಯ ತೊಂದರೆ, ಶೈಕ್ಷಣಿಕ ಅವ್ಯವಸ್ಥೆ, ಆರ್ಥಿಕ ಕಾರಣಗಳು — ಇವೆಲ್ಲವುಗಳಿಂದ ಕನ್ನಡ ಭಾಷೆಯ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಇಂದು ಅತ್ಯಂತ ಅವಶ್ಯಕವಾಗಿದೆ.

ಒಂದು ಭಾಷೆ ಅಸ್ತಿತ್ವ ಕಳೆದುಕೊಳ್ಳುವುದರಿಂದ ಜನತೆಯ ಮೇಲಾಗುವ ಪರಿಣಾಮ ಹಲವು ರೀತಿಯದು. 1) ಅನ್ಯಭಾಷೆಯ ಮೂಲಕ ಶಿಕ್ಷಣ, ಆಡಳಿತ,

ಕೊನೆಗೆ ಜನರ ಆಡುಮಾತು ಕೂಡ ಅನ್ಯಭಾಷೆಯ ಮೂಲಕ ನಡೆಯುವ ಪರಿಸ್ಥಿತಿ ಬರಬಹುದು. 2) ಇದರಿಂದ ಆ ಭಾಷೆಯ ಪರಂಪರೆ, ಅದರ ಮೂಲಕ ಹರಿದು ಬಂದ ಸಂಸ್ಕೃತಿ, ಸೃಜನಶೀಲತೆ, ಎಲ್ಲವೂ ನಾಶವಾಗುತ್ತದೆ. 3) ಆ ಭಾಷೆಯ ಜನರು ಅನ್ಯಭಾಷೆ ಹಾಗೂ ಅದನ್ನಾಡುವ ಜನರ ದಾಸ್ಯಕ್ಕೊಳಗಾಗಿ ಆರ್ಥಿಕ, ಸಾಮಾಜಿಕ ಶೋಷಣೆಗೊಳಗಾಗಬಹುದು. 4) ತನ್ನದೆಂದು ಗುರುತಿಸಬಹುದಾದ, ಸ್ವಂತ ದೇಶನನ್ನೂ ಉಳಿಸಿಕೊಳ್ಳಲಾಗದೆ ಆ ಜನಾಂಗ ಅನ್ಯರ ಪ್ರಭುತ್ವವನ್ನು ಒಪ್ಪಿಕೊಳ್ಳಬಹುದು. ಇದರಿಂದ ಆ ಜನಾಂಗ ಬಹಳಷ್ಟನ್ನು ಕಳೆದುಕೊಳ್ಳುತ್ತದೆ. ಭಾಷಾಶಾಸ್ತ್ರಜ್ಞರಾದ ಸ್ಕುಟನ್ನಾಬ್ ಕಾಂಗಾಸ್ ಅವರ ಪ್ರಕಾರ, '' ... ಭಾಷೆಯೊಂದನ್ನು ಕೊಲ್ಲುವ ಮೂಲಕ ಜನಾಂಗವೊಂದನ್ನು ಕೊಲ್ಲಲು ಸಾಧ್ಯ ಎಂದು ನಾವು ಹೇಳಬಹುದು.''[2] ಇಂಥ ಪರಿಸ್ಥಿತಿಯಿಂದ ಕನ್ನಡವನ್ನು ತಪ್ಪಿಸಬೇಕಾದ ತುರ್ತು ನಮ್ಮ ಮುಂದಿದೆ.

ಇಲ್ಲಿನ ಭಾಷಾ ಸಮಸ್ಯೆಗಳಲ್ಲಿ ಮುಖ್ಯವಾದುದು ಇಂಗ್ಲಿಷ್ ಮತ್ತು ಕನ್ನಡದ ನಡುವೆ ಇರಬೇಕಾದ ಸಂಬಂಧ ಹಾಗೂ ಇವುಗಳ ಸ್ಥಾನನಿರ್ಣಯದಲ್ಲಿನ ಗೊಂದಲ. ಇದು ವ್ಯಕ್ತವಾಗಿ ಆಡಳಿತ, ಶಿಕ್ಷಣ, ಸಮೂಹ ಮಾಧ್ಯಮ ಹಾಗೂ ವ್ಯವಹಾರಗಳಲ್ಲಿ ಉಂಟಾಗಿರುವ ಗೊಂದಲವಾದರೆ, ಅವ್ಯಕ್ತವಾಗಿ ಸಮಾಜದ ವರ್ಗಗಳಲ್ಲಿ, ವೈಚಾರಿಕ ನಿಲುವುಗಳಲ್ಲಿ, ಸಾಂಸ್ಕೃತಿಕ ಒಲವುಗಳಲ್ಲಿ ಉಂಟಾಗಿರುವ ಗೊಂದಲದ ಪರಿಣಾಮವಾಗಿದೆ.

## ಭಾಷಾಸಮಸ್ಯೆಗಳು

ವಿವಿಧ ಪರಿಸ್ಥಿತಿಗಳಿಗನುಗುಣವಾಗಿ ಒಂದು ಭಾಷೆ ಹಲವು ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಈ ಸಮಸ್ಯೆಗಳನ್ನು ಖಚಿತವಾಗಿ ಇಂತಿಷ್ಟು ಎಂದು ಪಟ್ಟಿ ಮಾಡುವುದು ಕಷ್ಟ. ಹಲವು ಭಾಷಾ ಸಮಸ್ಯೆಗಳು ಇನ್ನಿತರ ಭಾಷಿಕ ಅಥವಾ ಭಾಷಿಕವಲ್ಲದ ಸಮಸ್ಯೆಗಳೊಂದಿಗೆ ಸಂಬಂಧ ಪಡೆದಿರುತ್ತವೆ. ಅನೇಕ ಸಲ ಸಮಸ್ಯೆಗಳನ್ನು ಬೇರೆ ಬೇರೆ ಎಂದು ತಿಳಿಯಲೂ ಕೂಡ ಸಾಧ್ಯವಾಗುವುದಿಲ್ಲ. ಆದ್ದರಿಂದ ಮುಖ್ಯವಾದ ಒಂದು ಸಮಸ್ಯೆಯೊಂದಿಗೆ ಅದಕ್ಕೆ ತೀರ ಹತ್ತಿರದ ಸಂಬಂಧ ಹೊಂದಿರುವ ಇತರ ಸಮಸ್ಯೆಗಳನ್ನು ಸೇರಿಸಿಕೊಂಡು ವಿಶ್ಲೇಷಣೆ ಮಾಡುವುದು ಸೂಕ್ತವೆನಿಸುತ್ತದೆ:

1) ಅನ್ಯಭಾಷೆಯೊಂದರ ಹಿಡಿತ
2) ವಿಜ್ಞಾನ, ತಂತ್ರಜ್ಞಾನ ಶಿಕ್ಷಣಕ್ಕೆ ಅನ್ಯಭಾಷೆ
3) ಭಾಷಾವ್ಯಾಪ್ತಿ ಮತ್ತು ಭಾಷಾನೀತಿ
4) ಇತರ ಸಾಮಾಜಿಕ, ರಾಜಕೀಯ ಸಮಸ್ಯೆಗಳು.

ಈ ನಾಲ್ಕು ಸಮಸ್ಯೆಗಳ ವಿಶ್ಲೇಷಣೆಯೊಂದಿಗೆ ಅದಕ್ಕೆ ಸಂಬಂಧಪಡುವ ಇನ್ನಿತರ ವಿಷಯಗಳನ್ನು ವಿವರಿಸುವ ಅಗತ್ಯವೂ ಇದೆ.

### 1. ಅನ್ಯಭಾಷೆಯೊಂದರ ಹಿಡಿತ

ಒಂದು ಭಾಷೆಯನ್ನು ಇನ್ನೊಂದು ಭಾಷೆ ಪ್ರಭಾವಿಸುವುದಕ್ಕೂ, ಅದನ್ನು ಹಿಡಿತದಲ್ಲಿರಿಸಿಕೊಂಡು ಆಳುವುದಕ್ಕೂ ವ್ಯತ್ಯಾಸವಿದೆ. ಇದಕ್ಕೆ ಉದಾಹರಣೆಯಾಗಿ, ಇತರ ಭಾರತೀಯ ಭಾಷೆಗಳ ಮೇಲಾಗಿರುವ ಇಂಗ್ಲಿಷ್ ಪ್ರಭಾವವನ್ನೂ ಕನ್ನಡದ ಮೇಲಾಗಿರುವ ಇಂಗ್ಲಿಷ್ ಪ್ರಭಾವವನ್ನೂ ಹೋಲಿಸಬಹುದು. ಕನ್ನಡದ ಮೇಲೆ ಇಂಗ್ಲಿಷ್ ಪ್ರಭಾವವೂ ಆಗಿದೆ; ಅಷ್ಟೇ ಅದರ 'ಹಿಡಿತ'ವೂ ಬಲವಾಗಿದೆ.

ಪ್ರಭಾವ ಸಹಜ; ಅದು ಈಗಿನ ಸಂದರ್ಭದಲ್ಲಿ ಅನಿವಾರ್ಯವೂ ಹೌದು. ಭಾಷಾ ಪ್ರಭಾವಕ್ಕೆ ಮುಖ್ಯ ಕಾರಣಗಳು: 1) ಭಾಷಿಕ ಗಡಿಪ್ರದೇಶದಲ್ಲಿನ ಪರಸ್ಪರ ವ್ಯವಹಾರ 2) ಹೊಸಜ್ಞಾನ, ಹೊಸವಸ್ತು ಇತ್ಯಾದಿಗಳ ಪರಿಚಯ, ಹಾಗೂ 3) ಆಡಳಿತದಲ್ಲಿ ಅನ್ಯಭಾಷೆಯಿರುವುದು. ಇದರಲ್ಲಿ ಮೊದಲನೆಯ ಎರಡು ಕಾರಣಗಳಿಂದ ಕೇವಲ ಪ್ರಭಾವವಿರುತ್ತದೆ. ಮೂರನೆಯದರಿಂದ ಉಂಟಾಗುವ ಪ್ರಭಾವ ಕೇವಲ ಪ್ರಭಾವವಾಗಿರದೆ ಶಿಕ್ಷಣ, ಸಮೂಹ ಮಾಧ್ಯಮಗಳು, ಹಾಗೂ ವ್ಯವಹಾರ — ಎಲ್ಲದರ ಮೇಲೂ ಹಿಡಿತವನ್ನೂ ಹೊಂದಿರುತ್ತದೆ. ಆದ್ದರಿಂದ, ಪ್ರಭಾವ ಮತ್ತು ಹಿಡಿತದ ನಡುವಿನ ಸಂಬಂಧ, ವ್ಯತ್ಯಾಸಗಳನ್ನು ಹೀಗೆ ಗುರುತಿಸಬಹುದು: (ಅ) ಆಡಳಿತ ಭಾಷೆಯಾಗಿರದೆ, ಅನ್ಯ ಕಾರಣಗಳಿಂದ ಉಂಟಾಗುವ ಭಾಷಾ ಪ್ರಭಾವ 'ಕೇವಲ ಪ್ರಭಾವ' (ಆ) ಆಡಳಿತ ಭಾಷೆಯಾಗಿದ್ದುಕೊಂಡು ಪ್ರಭಾವ ಬೀರುವುದು 'ಹಿಡಿತದೊಂದಿಗಿನ ಪ್ರಭಾವ'. ಕರ್ನಾಟಕದ ಗಡಿಪ್ರದೇಶಗಳಲ್ಲಿ ಉಂಟಾಗಿರುವ ಮರಾಠಿ, ತಮಿಳು, ಮಲಯಾಳಂ ಪ್ರಭಾವಗಳು 'ಕೇವಲ ಪ್ರಭಾವ'ಕ್ಕೆ ಉದಾಹರಣೆಯಾದರೆ, ಇಂಗ್ಲಿಷ್ ಪ್ರಭಾವ 'ಹಿಡಿತದೊಂದಿಗಿನ ಪ್ರಭಾವ'.

ಪ್ರಭಾವಿತವಾದ ಭಾಷೆಗೆ ಅಪಾರ ಲಾಭವಾಗುತ್ತದೆ ಹಾಗೂ ಅದು ತೀವ್ರವಾಗಿ ಬೆಳೆಯುತ್ತದೆ. ಆದರೆ ಯಾವಾಗ ಒಂದು ಭಾಷೆ ಇನ್ನೊಂದರ ಅಧೀನದಲ್ಲಿ ಇರಬೇಕಾಗುತ್ತದೋ, ಆಗ ಅದರ ದಾಸ್ಯತೆ ಆರಂಭವಾಗುತ್ತದೆ. ಒಂದು ಆಡಳಿತ ಘಟಕದಲ್ಲಿ ಅದರ ಭೌಗೋಳಿಕ ವ್ಯಾಪ್ತಿಯೊಳಗಿನ ಜನರು ಆಡುವ ಭಾಷೆ ಆಡಳಿತ ಭಾಷೆಯಾಗಿಲ್ಲದಿದ್ದರೆ, ಅದು ಅಲ್ಲಿಗೆ ಪ್ರಾದೇಶಿಕ ಭಾಷೆಯನ್ನು ಅಥವಾ ಭಾಷೆಗಳನ್ನು ಹಿಡಿತದಲ್ಲಿಟ್ಟುಕೊಳ್ಳುತ್ತದೆ.

ಭಾಷಾಪ್ರಭಾವದಲ್ಲಿ ಅನ್ಯಭಾಷೆಯ ಶಬ್ದಗಳನ್ನು ಹಾಗೂ ಜ್ಞಾನಭಂಡಾರವನ್ನು ಸ್ಥಳೀಯ ಭಾಷೆಗಳು ಸ್ವೀಕರಿಸುತ್ತವೆ. ಆದರೆ ಅಲ್ಲಿ ಇನ್ನೂ ಸ್ಥಳೀಯ ಭಾಷೆ ತನ್ನ ಅಸ್ತಿತ್ವವನ್ನು ಕಳೆದುಕೊಂಡಿರಲಾರದು. ಆ ಭಾಷೆಯ ಬೆಳವಣಿಗೆಯಾದಂತೆ ಅದು ಅನ್ಯ ಪ್ರಭಾವಕ್ಕಿಂತ ಹೆಚ್ಚಾಗಿ ತನ್ನ ಸ್ವಂತಿಕೆಯನ್ನು ತೋರ್ಪಡಿಸಬಹುದು.

ಹೀಗಾಗುವುದಕ್ಕೆ ಮೊದಲು ಅನ್ಯಭಾಷಾಪ್ರಭಾವ ಅತಿಯಾಗಿ, ಸ್ಥಳೀಯ ಭಾಷೆಗೆ ಉಸಿರುಕಟ್ಟಿದಂತಾಗಬಹುದು. ಆದರೆ ಜನರ ಆಡುಭಾಷೆಗೆ ಹಾಗೂ ಅದರ ಅಸ್ತಿತ್ವಕ್ಕೆ ತೊಂದರೆಯುಂಟಾಗಲಾರದು. ಹಾಗೆ ಉಸಿರುಕಟ್ಟುವಂತಾದೊಡನೆಯೇ ಆ ಭಾಷೆಯನ್ನಾಡುವವರಲ್ಲಿ ಹೊಸ ಜಾಗೃತಿಯುಂಟಾಗಬಹುದು; ಭಾಷೆ ಮತ್ತೆ ತನ್ನ ಸಹಜ ಸ್ಥಿತಿಗೆ ಮರಳಬಹುದು. ಕನ್ನಡ ಸಂಸ್ಕೃತದ ಪ್ರಭಾವವನ್ನು ಜೀರ್ಣಿಸಿಕೊಂಡದ್ದು ಹೀಗೆಯೇ.

''ಕನ್ನಡವು, ಸಂಸ್ಕೃತ:ಪ್ರಾಕೃತ ಹಾಗೂ ಪರ್ಷಿಯನ್, ಅರಾಬಿಕ್‌ಗಳೊಡನೆ ಸಹಬಾಳ್ವೆ ನಡೆಸಿ ತನ್ನದೇ ಆದ ಚಹರೆಯನ್ನು ಕಾಯ್ದುಕೊಂಡಿದೆ ನಿಜ. ಆದರೆ ಅದೇ ಸಾಧ್ಯತೆ ಇಂಗ್ಲಿಷಿನ ಸಂದರ್ಭದಲ್ಲೂ ನಡೆಯುತ್ತದೆ ಎನ್ನುವಂತಿಲ್ಲ. ಇಂಗ್ಲಿಷಿಗೆ ಇರುವ ಆಧುನಿಕ ಹಾಗೂ ವೈಶ್ವಿಕ ಒತ್ತಾಸೆಗಳು ಕನ್ನಡಕ್ಕೆ ಎದುರಾದ ಮತ್ತಾವ ಭಾಷೆಗೂ ಇರಲಿಲ್ಲ. ಇಂಗ್ಲಿಷ್ ಈಗ ನವಸಾಮ್ರಾಜ್ಯಶಾಹಿಯ ಪ್ರಬಲ ಅಸ್ತ್ರವಾಗಿದೆ. ಅದು ಕನ್ನಡದ ಶಕ್ತಿಯನ್ನು ನಿರ್ನಾಮ ಮಾಡುವುದಿಲ್ಲ. ಬದಲಿಗೆ ಅದರ ರೆಕ್ಕೆಪುಕ್ಕಗಳನ್ನು ಕತ್ತರಿಸಿ ಬಿಡುತ್ತದೆ.''[3] ಇಲ್ಲಿ ಕೆ.ವಿ. ನಾರಾಯಣ ಅವರು ಹೇಳುವ 'ಸಹಬಾಳ್ವೆ' ನಡೆಸುವುದಕ್ಕೂ ಒಂದು ಇನ್ನೊಂದು ಭಾಷೆಯನ್ನು ಆಳುವುದಕ್ಕೂ ಇರುವ ವ್ಯತ್ಯಾಸ 'ಪ್ರಭಾವ' ಮತ್ತು 'ಹಿಡಿತ'ಗಳ ನಡುವಿನ ವ್ಯತ್ಯಾಸವೇ ಆಗಿದೆ. ಅನ್ಯಭಾಷೆಯ ಹಿಡಿತವುಂಟಾಗಿರುವುದರ ಮುಖ್ಯ ಲಕ್ಷಣವೇ, ಅದು ಆಡಳಿತ ಕಚೇರಿಗಳಲ್ಲೂ, ಎಲ್ಲ ಸರಕಾರೀ ವ್ಯವಹಾರಗಳಲ್ಲೂ ಅನಿವಾರ್ಯವಾಗಿರುವುದು. ಆಡಳಿತದಲ್ಲಿ ಅನ್ಯಭಾಷೆ ಬಂದೊಡನೆ, ಅದು ಆ ಪ್ರದೇಶದ ಭಾಷೆಯ ಮೇಲೆ ಬೀರುವ ಪ್ರಭಾವ ತೀವ್ರಗೊಳ್ಳುತ್ತದೆ.

ಆಡಳಿತ ಭಾಷೆಯಾಗಿ ಅನ್ಯಭಾಷೆಯಿದ್ದಾಗ ಅದು ಜೀವನದ ಎಲ್ಲ ವಲಯಗಳಿಗೂ ವ್ಯಾಪಿಸುತ್ತದೆ. ಸರಕಾರೀ ವ್ಯವಹಾರಗಳೆಲ್ಲ ಇಂಗ್ಲಿಷಿನಲ್ಲೇ ನಡೆಯುತ್ತಿರುವಾಗ ಕನ್ನಡಕ್ಕಿಂತ ಆ ಭಾಷೆಗೇ ಮನ್ನಣೆ ಇರುತ್ತದೆ. ನಗರ ಪ್ರದೇಶಗಳಲ್ಲಂತೂ ಎಲ್ಲ ವ್ಯವಹಾರಗಳಿಗೂ ಆಡಳಿತ ಭಾಷೆಯನ್ನೇ ಅವಲಂಬಿಸಬೇಕಾಗುತ್ತದೆ. ಸರಕಾರೀ ಉದ್ಯೋಗಗಳಿಗೂ ಆ ಭಾಷೆಯ ಜ್ಞಾನ ಅನಿವಾರ್ಯವಾದಾಗ ಎಲ್ಲರೂ ಆ ಭಾಷೆಯ

ಶಿಕ್ಷಣ ಪಡೆಯಲು ಬಯಸುತ್ತಾರೆ. ಸರಕಾರ ಕೂಡ ಆಡಳಿತ ಭಾಷೆಯಲ್ಲೇ ಶಿಕ್ಷಣ ನೀಡಲು ಮುಂದಾಗುತ್ತದೆ. ಸ್ಥಳೀಯ ಭಾಷೆಗಳಿಗೆ ಶಿಕ್ಷಣದಲ್ಲಿ ಅವಕಾಶವಿದ್ದರೂ, ಅದಕ್ಕೆ ಆಡಳಿತ ಭಾಷೆಗಿರುವ ಸ್ಥಾನ, ಅನಿವಾರ್ಯತೆ, ಗೌರವ — ಯಾವುದೂ ಇರುವುದಿಲ್ಲ. ಜನರ ಆಡುಭಾಷೆಗಿಂತ ಅನ್ಯಭಾಷೆ ಪ್ರಧಾನವಾದಾಗ ಅರಿವಿಲ್ಲದೆ ಅವರನ್ನು ಅನ್ಯ ಸಂಸ್ಕೃತಿ, ಅನ್ಯ ರೀತಿ—ನೀತಿ, ನಡುವಳಿಕೆಗಳು, ಮೌಲ್ಯಗಳು, ಅನ್ಯ ಚಿಂತನಾ ಕ್ರಮ ಆವರಿಸುತ್ತದೆ. ಕ್ರಮೇಣ ಅವರ ನಡೆ — ನುಡಿಯಷ್ಟೇ ಅಲ್ಲ; ಆಡುಮಾತೂ ಬಹುಪಾಲು ಅಥವಾ ಪೂರ್ಣವಾಗಿ ಅನ್ಯಭಾಷೆಯದಾಗಿ ಬಿಡುತ್ತದೆ.

ಆದರೆ ಗ್ರಾಮೀಣ ಪರಿಸರದಲ್ಲಿ ಪರಿಸ್ಥಿತಿ ಬೇರೆಯಾಗಿರುವುದರಿಂದ ಸಮಸ್ಯೆಗಳೂ ಬೇರೆ ಬಗೆಯದಾಗಿರುತ್ತದೆ; ಆ ಸಮಸ್ಯೆಗಳು ಇನ್ನೂ ಹಲವು ಸಮಸ್ಯೆಗಳಿಗೆ ಕಾರಣ ವಾಗುತ್ತವೆ. ಬಹುಮಂದಿ ಅನಕ್ಷರಸ್ಥರಾಗಿರುವ ಹಳ್ಳಿಗಳಲ್ಲಿ ಅಷ್ಟೊಂದು ತೀವ್ರವಾಗಿ ಆಡಳಿತ ಭಾಷೆಯ ಪ್ರಭಾವವಾಗಲಾರದು. ಆದರೆ ಪ್ರತಿಯೊಂದು ಆಫೀಸು ವ್ಯವಹಾರ ಗಳಲ್ಲೂ ಅವರು ಆಡಳಿತಭಾಷೆಯ ಶಿಕ್ಷಣ ಪಡೆದವರನ್ನೇ ಅವಲಂಬಿಸಬೇಕಾಗುತ್ತದೆ. ಇಲ್ಲಿ ಅವರು ಸಾಕಷ್ಟು ಶೋಷಣೆಗಳಿಗೆ ಒಳಗಾಗುವ ಸಾಧ್ಯತೆಯಿದೆ. ಸರಕಾರದ ಯಾವುದೇ ನಿರ್ದೇಶ — ಅಧಿಸೂಚನೆ ಅನ್ಯಭಾಷೆಯಲ್ಲಿರುವುದರಿಂದ ಅದರ ಅನುಕೂಲತೆ ಗಳನ್ನು ಸೀಮಿತ ಜನರು ಮಾತ್ರ ಪಡೆಯುತ್ತಾರೆ. ಗ್ರಾಮೀಣ ಜನರಿಗಾಗಿ ಸರಕಾರ ಎಷ್ಟೇ ಯೋಜನೆಗಳನ್ನು ಹಾಕಿಕೊಂಡರೂ, ಎಷ್ಟೇ ಧನ ವಿನಿಯೋಗ ಮಾಡಿದರೂ ಅವರ ಉದ್ಧಾರ ಸಾಧ್ಯವಾಗುವುದಿಲ್ಲ. ಸರಕಾರದ ಹಣ ಎಷ್ಟೇ ಅಪವ್ಯಯವಾದರೂ ಗ್ರಾಮೀಣ ಜನತೆಗೆ ಅರಿವಾಗುವುದಿಲ್ಲ. ಜನರ ದುಸ್ಥಿತಿ ಹಳ್ಳಿಯ ವ್ಯವಸಾಯ, ಶೈಕ್ಷಣಿಕ ಪ್ರಗತಿ — ಎಲ್ಲವಕ್ಕೂ ಅಡ್ಡಿಯಾಗುತ್ತದೆ. ಆಡಳಿತ ಭಾಷೆಯನ್ನು ಬಲ್ಲ ಕೆಲವೇ ಮಂದಿಗಳ ಕೈಯಲ್ಲಿ ಹಳ್ಳಿಯ ರಾಜಕೀಯ ನಡೆಯುತ್ತದೆ.

ಅನ್ಯಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ನೀಡಿದಾಗ ಶೈಕ್ಷಣಿಕ ವ್ಯವಸ್ಥೆಯೇ ಹದಗೆಡುತ್ತದೆ. ಕರ್ನಾಟಕದಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳ ಅವಸ್ಥೆಯನ್ನು ನೋಡ ಬಹುದು. ಭ. ಕೃಷ್ಣಮೂರ್ತಿಯವರು ಹೇಳುತ್ತಾರೆ: ''ಗ್ರಾಮೀಣ ಪ್ರದೇಶ ಹಾಗೂ ನಗರಗಳಲ್ಲಿ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಾಲೆಗಳು ನಾಯಿಕೊಡೆಗಳಂತೆ

ತಲೆಯೆತ್ತಿವೆ. ಪ್ರತಿಯೊಂದರಲ್ಲಿಯೂ ಪೂರ್ವಸಿದ್ಧತೆಯಿಲ್ಲದ, ತರಬೇತಿ ಸಾಲದ ಅಧ್ಯಾಪಕರು. ಇಂಥ ಶಾಲೆಗಳಿಂದ ಹೊರಬರುವ ವಿದ್ಯಾರ್ಥಿಗಳಿಗೆ ನಮ್ಮ ತಾಯಿನುಡಿಯ ತಿಳುವಳಿಕೆ ಬಹಳ ಕಮ್ಮಿ. ಅದನ್ನು ಶೈಕ್ಷಣಿಕ ಪರಿಸರದಲ್ಲಿ ಬಳಸುವ ಹಾಗೂ ಅದರ ಬಳಕೆಯ ಹಲವು ಸಂದರ್ಭಗಳನ್ನು ಪರಿಚಯ ಮಾಡಿಕೊಳ್ಳುವ ಅವಕಾಶಗಳು ಮತ್ತಷ್ಟು ಕಡಿಮೆ. ಹೀಗಾಗಿ ಅವರು ಸಾಂಸ್ಕೃತಿಕವಾಗಿ ದಿಕ್ಕುಗೆಟ್ಟದ್ದಾರೆ. ಹೊರಗೆ ಉಳಿದಿದ್ದಾರೆ. ತಮ್ಮ ಸುತ್ತಲ ಜಗತ್ತಿನೊಂದಿಗೆ ಅವರ ಸಂಪರ್ಕವು ವಿಕಲವಾಗಿದೆ.'' [4]

ಸಮೂಹ ಮಾಧ್ಯಮಗಳ ಮೇಲೆ ಕೂಡ ಆಡಳಿತ ಭಾಷೆಯ ಹಿಡಿತ ಬಲವಾಗಿರುತ್ತದೆ. ಜನರ ಅಭಿಪ್ರಾಯಗಳನ್ನು ರೂಪಿಸುವ ಪ್ರಬಲ ಮಾಧ್ಯಮಗಳಾದ ಟಿ.ವಿ., ರೇಡಿಯೋ, ಪತ್ರಿಕೆಗಳಲ್ಲಿ ಆಡಳಿತ ಭಾಷೆಗೇ ಅಧಿಕೃತತೆ ದೊರಕುವುದರಿಂದ, ಅಲ್ಲಿ ನಡೆಯುವ ತಪ್ಪು, ಮೋಸ — ಎಲ್ಲವೂ ಜನರ ಅಭಿಪ್ರಾಯದಲ್ಲೂ ಸೇರಿಬಿಡುತ್ತದೆ. ಹಾಗಾಗಿ ಆಡಳಿತಯಂತ್ರ ಮತ್ತಷ್ಟು ಬಲಗೊಳ್ಳುತ್ತದೆ. ಅಜ್ಞಾನ ಮತ್ತು ಶೋಷಣೆ — ಇವುಗಳ ಮುಂದುವರಿಕೆ ನಿರಂತರವಾಗುತ್ತದೆ.

## 2. ವಿಶೇಷ ಜ್ಞಾನಕ್ಕಾಗಿ ಅನ್ಯಭಾಷೆ

ವಿಶೇಷ ಜ್ಞಾನಕ್ಕೋಸ್ಕರ ಇನ್ನೊಂದು ಭಾಷೆಯನ್ನು ಕಲಿಯುವುದು ಬಹಳ ಉಪಯುಕ್ತವೆಂಬ ವಿಚಾರವನ್ನು ಯಾರೂ ಅಲ್ಲಗಳೆಯಲಾರರು. ಆದರೆ ಇಲ್ಲಿನ ಸಮಸ್ಯೆಯಿದು: 1) ಎಷ್ಟರಮಟ್ಟಿಗೆ ಅನ್ಯಭಾಷೆಯನ್ನು ಕಲಿಯಬೇಕು? ಮತ್ತು 2) ಅದನ್ನು ಮಾಧ್ಯಮವಾಗಿ ಬಳಸಿಕೊಳ್ಳಬೇಕು?

ಇಂಗ್ಲಿಷ್ ಅತ್ಯಂತ ಅಗತ್ಯವೆನ್ನುವವರು ಮುಂದಿಡುವ ಒಂದು ವಾದ ಇದು: ಆಧುನಿಕ ವಿಜ್ಞಾನ, ತಂತ್ರಜ್ಞಾನ ಮತ್ತು ಇನ್ನಿತರ ಜ್ಞಾನಶಾಖೆಗಳ ಅಧ್ಯಯನಕ್ಕೆ ಇಂಗ್ಲಿಷ್ ಭಾಷೆಯ ತಿಳುವಳಿಕೆ ಅನಿವಾರ್ಯ ಎಂದು. ಮೇಲೆ ಎತ್ತಲಾದ ಪ್ರಶ್ನೆಯ ಬೆಳಕಿನಲ್ಲಿ ಈ ವಿಷಯವನ್ನು ಗಮನಿಸಬಹುದು. ಇಂಗ್ಲಿಷಿನಲ್ಲಿ ಜಗತ್ತಿನ ಎಲ್ಲ ಜ್ಞಾನಗಳೂ ದೊರೆಯಬಹುದೆಂಬುದರಲ್ಲೂ, ಅದರ ಜ್ಞಾನದಿಂದ ಬಹಳ ಸುಲಭವಾಗಿ ವಿಜ್ಞಾನ, ತಂತ್ರಜ್ಞಾನ ಪಾರಿಭಾಷಿಕ ಪದಗಳನ್ನು, ಪರಿಕಲ್ಪನೆಗಳನ್ನು ತಿಳಿದುಕೊಳ್ಳಬಹುದು.ಎಂಬುದರಲ್ಲೂ ಸಂದೇಹಕ್ಕೆಡೆಯಿಲ್ಲ. ಅದಕ್ಕಾಗಿ ಇಂಗ್ಲಿಷ್ ಭಾಷೆಯನ್ನು ಕಲಿಯುವುದು ಕೂಡ ಉಪಯುಕ್ತವಾದೀತು. ಆದರೆ ಎಷ್ಟು ಕಲಿಯಬೇಕು? ಎಂಬುದು ಮುಖ್ಯವಾದ ಪ್ರಶ್ನೆ. ಇಲ್ಲಿ ಎರಡು ರೀತಿ ಕಲಿಯಬಹುದು: 1) ಇಂಗ್ಲಿಷ್ ಮಾಧ್ಯಮದಲ್ಲೇ ಬೋಧನೆ, ವಿಚಾರ ವಿನಿಮಯ ಹಾಗೂ ಪರೀಕ್ಷೆ. 2) ಅಗತ್ಯವಿದ್ದಲ್ಲಿ ಮಾತ್ರ ಇಂಗ್ಲಿಷ್ ಹೊರತು ಉಳಿದಂತೆಲ್ಲ ಕನ್ನಡ ಮಾಧ್ಯಮ.

ಮೊದಲನೆಯ ರೀತಿಯಲ್ಲಿ ಇಂಗ್ಲಿಷಿನಲ್ಲಿಯೇ ವಿಷಯವನ್ನು ಪಾಠ ಮಾಡಬೇಕು, ಅದರಲ್ಲೇ ಓದಬೇಕು, ಬರೆಯಬೇಕು. ಇಂದು ನಮ್ಮಲ್ಲಿ ನಡೆಯುತ್ತಿರುವ ಶಿಕ್ಷಣ ಕ್ರಮ ಬಹುಮಟ್ಟಿಗೆ ಈ ರೀತಿಯದು. ಇಲ್ಲಿ ಸಂಪೂರ್ಣ ಇಂಗ್ಲಿಷ್ ಮಾಧ್ಯಮವಾಗುವ ಪ್ರಯತ್ನ; ಶಾಲಾ ಕಾಲೇಜುಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಆದಷ್ಟು ಪ್ರಾದೇಶಿಕ ಭಾಷೆಯನ್ನು ಬಳಸದಂತೆ ಅಧ್ಯಾಪಕ ಶ್ರಮವಹಿಸುತ್ತಾನೆ. ವಿದ್ಯಾರ್ಥಿಗಳೂ ಇದನ್ನು ಅನುಸರಿಸುತ್ತಾರೆ.

ಎರಡನೇ ರೀತಿಯಲ್ಲಿ ವಿಷಯವನ್ನು ಅರಿತುಕೊಳ್ಳುವುದೇ ಮುಖ್ಯ ಹೊರತು ಅದರ ಮಾಧ್ಯಮವಾಗಿರುವ ಭಾಷೆಯಲ್ಲ. ಆದ್ದರಿಂದ, ಅದನ್ನು ಅರ್ಥಮಾಡಿಕೊಳ್ಳುವುದು ಮುಖ್ಯ. ಹಾಗಾಗಿ, ವಿಷಯವನ್ನು ಅರ್ಥಮಾಡಿಕೊಳ್ಳುವಷ್ಟು ಮಾತ್ರ ಇಂಗ್ಲಿಷ್ ಕಲಿತರೆ ಸಾಕು; ಅದರ ಅಭಿವ್ಯಕ್ತಿಯನ್ನು ಕನ್ನಡದಲ್ಲಿ ಮಾಡಬಹುದು. ಒಂದು ವಿಷಯದ ಅರ್ಥ ನಮಗಾಗಿದೆಯೆಂದರೆ ಅದನ್ನು ನಮ್ಮ ಮಾತೃಭಾಷೆಯಲ್ಲಿ ಅಭಿವ್ಯಕ್ತಿಗೊಳಿಸಲು ಸಾಧ್ಯವೆಂದೇ ಅರ್ಥ. ಇದರಿಂದಾಗಿ, ತನ್ನ ಮಾತೃಭಾಷೆಯಲ್ಲಿ ಅಂಥಾ ಜ್ಞಾನದ ಗ್ರಂಥವಿಲ್ಲದ ಕೊರತೆಯಿಂದಾಗಿ ಮತ್ತು ಅನ್ಯಭಾಷೆಯ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಮಾತ್ರ ಆತ ಬೇರೆ ಭಾಷೆಯ ಗ್ರಂಥಗಳನ್ನು ಓದಬೇಕಾಗುತ್ತದೆ. ಆದರೆ ತನ್ನ ಮಾತೃಭಾಷೆಯಲ್ಲಿ ಆತ ಆ ಜ್ಞಾನವನ್ನು ಅಭಿವ್ಯಕ್ತಿಗೊಳಿಸಿದಾಗ ಆ ಭಾಷೆ ಬೆಳೆಯುತ್ತದೆ. ಅನಂತರ ಆ ಭಾಷೆಯಲ್ಲಿ ವಿಜ್ಞಾನವನ್ನು ಕಲಿಸಬಹುದಾದಷ್ಟು ಸಾಮರ್ಥ್ಯ ಬಂದಾಗ ಪೂರ್ಣವಾಗಿ ಆ ಭಾಷಾ ಮಾಧ್ಯಮದಲ್ಲೇ ಕಲಿಸಬಹುದು.

ಇಲ್ಲಿ ಮೊದಲಿನ ರೀತಿಗಿಂತ ಎರಡನೇ ರೀತಿಯಲ್ಲಿ ವಿಷಯಗ್ರಹಣ ಹೆಚ್ಚು ಸುಲಭ. ಇದರಿಂದ, ಹೆಚ್ಚಿನ ಜ್ಞಾನಕ್ಕಾಗಿ ಇಂಗ್ಲಿಷ್ ಭಾಷೆಯ ಅವಲಂಬನೆಯ ಮಿತಿಯನ್ನು ಹೀಗೆ ನಿಗದಿಪಡಿಸಬಹುದು. ವಿಷಯ ಅರ್ಥವಾಗುವಷ್ಟು ಇಂಗ್ಲಿಷನ್ನು ಕಲಿತರೆ ಸಾಕು. ಅದನ್ನು ಬೋಧಿಸುವಾಗ, ಮತ್ತು ಕಲಿಯುವಾಗ ಮಾತೃಭಾಷೆಯನ್ನೇ ಬಳಸಬಹುದು. ಇದರಿಂದ ವಿಷಯಗ್ರಹಣ ಹಾಗೂ ಸೃಜನಶೀಲತೆ ಹೆಚ್ಚುತ್ತದೆ. ಮಾತೃಭಾಷೆಯಲ್ಲಿ ವಿಜ್ಞಾನ, ತಂತ್ರಜ್ಞಾನಗಳ ಗ್ರಂಥವನ್ನು ಭಾಷಾಂತರಿಸುವ ಮೂಲಕ ಅನ್ಯಭಾಷೆಯಲ್ಲಿ ಕಲಿಸಬೇಕಾದ ಅನಿವಾರ್ಯತೆಯನ್ನು ತಪ್ಪಿಸಬಹುದು. ಹಾಗಿದ್ದೂ ಅನ್ಯಭಾಷಾ ಜ್ಞಾನ ಅನಿವಾರ್ಯವಾದರೆ, ಅರ್ಥಮಾಡಿಕೊಳ್ಳುವಷ್ಟು ಮಾತ್ರ ಇಂಗ್ಲಿಷ್ ಕಲಿತರೆ ಸಾಕು. ಖ್ಯಾತ ಶಿಕ್ಷಣ ತಜ್ಞರಾದ ಎಚ್.ನರಸಿಂಹಯ್ಯನವರು ಹೇಳುತ್ತಾರೆ, ''ಮಾತೃಭಾಷೆಯಲ್ಲಿ ಶಿಕ್ಷಣ ಕೊಡಬೇಕು ಎನ್ನುವುದು ವಿಶ್ವಮಾನ್ಯ ಸತ್ಯ. ಪ್ರಪಂಚದ ಎಲ್ಲಾ ಶಿಕ್ಷಣ ತಜ್ಞರ ಒಮ್ಮತದ ಅಭಿಪ್ರಾಯ. ಒಂದು ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದರೆ ಅದು ಮಾತೃಭಾಷೆಯ ಮೂಲಕ ಸಾಧ್ಯ, ಜೊತೆಗೆ ಶಿಕ್ಷಣದ ಇನ್ನೊಂದು

ಬಹುಮುಖ್ಯ ಉದ್ದೇಶವನ್ನು ನಾವೆಲ್ಲಾ ಮರೆತಿದ್ದೇವೆ. ಯಾವುದೇ ಶಿಕ್ಷಣ ಪದ್ಧತಿ ಯಾಗಲಿ ತರಗತಿಗಳಲ್ಲಿ ಪ್ರಶ್ನೋತ್ತರ ಇರಬೇಕು. ವಿಷಯಗಳ ಮೇಲೆ ವಿದ್ಯಾರ್ಥಿ, ಅಧ್ಯಾಪಕರ ಸಂವಾದ ಅತಿಮುಖ್ಯ. ಇಂತಹ ಶಿಕ್ಷಣ ಇಲ್ಲದೇ ಹೋದರೆ ಅದು ಬಹುತೇಕ ಅಪೂರ್ಣ. ಇಂಗ್ಲಿಷ್ ಮಾಧ್ಯಮದಿಂದ ವಿಷಯ ಅರ್ಥವಾಗುವುದೇ ಕಷ್ಟವಾದರೆ ಇನ್ನು ವಿದ್ಯಾರ್ಥಿಗೆ ಇಂಗ್ಲೀಷಿನಲ್ಲಿ ಪ್ರಶ್ನೆ ಕೇಳುವ ಧೈರ್ಯ ಅಥವಾ ಶಕ್ತಿ ಎಲ್ಲಿಂದ ಬರುತ್ತದೆ?

''ಕನ್ನಡ ಭಾಷೆಯ ಬಳಕೆಯಿಂದ ವಿಷಯ ಚೆನ್ನಾಗಿ ಅರ್ಥವಾಗುವುದು ಅಷ್ಟೇ ಅಲ್ಲ, ಆತ್ಮೀಯತೆಯೂ ಬೆಳೆಯುತ್ತದೆ. ಅಸಹಜವಾಗಿ, ಅನಗತ್ಯವಾಗಿ ಇಂಗ್ಲೀಷ್ ಉಪಯೋಗಿಸಿದರೆ ವಿದ್ಯಾರ್ಥಿ, ಉಪಾಧ್ಯಾಯರ ಮಧ್ಯೆ ಒಂದು ದೊಡ್ಡ ಕಂದರ ಸೃಷ್ಟಿ ಯಾಗುತ್ತದೆ. ಇದರಿಂದ ಹಲವು ಸಮಸ್ಯೆಗಳು ಉದ್ಭವಿಸುತ್ತವೆ. ಇದು ಉತ್ತಮ ಶಿಕ್ಷಣ ಪದ್ಧತಿಯ ಲಕ್ಷಣವಲ್ಲ.''[5]

ಇದೇ ವಿಷಯದ ಕುರಿತು ಕುವೆಂಪು ಅವರು ಹೀಗೆ ಹೇಳುತ್ತಾರೆ: ''ಇಂಗ್ಲಿಷ್ ಎಲ್ಲರಿಗೂ ಆವಶ್ಯಕವೆ? ಎಂಬುದನ್ನು ನಿರ್ಣಯ ಮಾಡಬೇಕು. ನಮ್ಮ ಕರ್ನಾಟಕ ದಲ್ಲಿ ಎಷ್ಟು ಮಂದಿ ವಿದ್ಯಾರ್ಥಿಗಳು ಅಖಿಲಭಾರತರಂಗಕ್ಕೆ ಹೋಗುತ್ತಾರೆ? ಎಷ್ಟು ಮಂದಿ ವಿದ್ಯಾರ್ಥಿಗಳು ಅಂತರರಾಷ್ಟ್ರೀಯ ರಂಗಕ್ಕೆ ಪ್ರವೇಶಿಸುತ್ತಾರೆ? — ಈ ವಿಚಾರವನ್ನು ಮನನ ಮಾಡಬೇಕು. ಅಖಿಲ ಭಾರತೀಯ ರಂಗಕ್ಕೆ ಪ್ರವೇಶಿಸುವವರಿಗೆ ಇಂಗ್ಲಿಷ್ ಬೇಕು. ಅಂತಹ ವಿದ್ಯಾರ್ಥಿಗಳ ಪ್ರಮಾಣ ಎಷ್ಟು? ಅಂತರರಾಷ್ಟ್ರೀಯ ಸ್ಥಾನಮಾನಗಳಲ್ಲಿ ರಾಜಕೀಯ, ವೈಜ್ಞಾನಿಕ ಇತ್ಯಾದಿ ಶಾಲೆಗಳಿಗೆ ಪ್ರವೇಶಿಸುವವರಿಗೆ ಇಂಗ್ಲಿಷ್ ಭಾಷೆಯ ಜ್ಞಾನ ಆವಶ್ಯಕ. ಇನ್ನು ಕರ್ನಾಟಕದಲ್ಲಿಯೆ ಇದ್ದು ತಮ್ಮ ಜೀವನವನ್ನು ರೂಪಿಸಿಕೊಳ್ಳುವವರೂ ಇದ್ದಾರೆ. ಈ ಮೂರು ವರ್ಗದ ವಿದ್ಯಾರ್ಥಿ ಗಳನ್ನು ವಿಭಾಗ ಮಾಡಿಕೊಂಡು ಯಾರು ಯಾರಿಗೆ ಎಷ್ಟು ಇಂಗ್ಲಿಷ್ ಬೇಕು ಎಂಬುದನ್ನು ನಿಷ್ಕರ್ಷಿಸಬೇಕು.

''ನಮ್ಮಲ್ಲಿ ಬಹುಜನರಿಗೆ ಓದಿ ವಿಷಯವನ್ನು ತಿಳಿದುಕೊಳ್ಳುವಷ್ಟು ಇಂಗ್ಲಿಷ್ ಬಂದರೆ ಸಾಕು. ಅದಕ್ಕಿಂತ ಕಡಿಮೆ ಸಂಖ್ಯೆಯ ಜನರಿಗೆ ಇಂಗ್ಲಿಷ್ ಮಾತನಾಡುವ, ಓದುವ, ಬರೆಯುವ ಜ್ಞಾನ ಬೇಕು. ಈಗ ನನಗೆ ಸಂಸ್ಕೃತ ಮಾತನಾಡಲು ಬರುವುದಿಲ್ಲ,

ಆದರೆ ಸಂಸ್ಕೃತ ಗ್ರಂಥಗಳನ್ನು ಓದಿ ವಿಷಯವನ್ನೂ ವಿಚಾರವನ್ನೂ ಗ್ರಹಿಸುತ್ತೇನೆ. ಬಂಗಾಳಿ ಭಾಷೆಯಲ್ಲಿ ನನಗೆ ಮಾತನಾಡಲು ಬರುವುದಿಲ್ಲ. ಆದರೆ ಪುಸ್ತಕಗಳನ್ನು ಓದಿ ಆದರ ವಿಚಾರವನ್ನು ಗ್ರಹಿಸಿ ಪುಷ್ಟಿಯನ್ನು ಪಡೆಯಬಲ್ಲೆ. ನಮ್ಮ ದೇಶದಲ್ಲಿ ವಿಷಯ ಪರಿಜ್ಞಾನಕ್ಕಾಗಿ ಅನೇಕರಿಗೆ ಇಂಗ್ಲಿಷ್ ಭಾಷೆಯನ್ನು ಓದಿ ಅರ್ಥಮಾಡಿಕೊಳ್ಳುವಷ್ಟು ಜ್ಞಾನವಿದ್ದರೆ ಸಾಕು.''

''ಇಂಗ್ಲಿಷ್ ತರಗತಿಯಲ್ಲಿ ಎದ್ದು ನಿಂತು ಇಂಗ್ಲಿಷನಲ್ಲಿಯೇ ಪ್ರಶ್ನೆ ಕೇಳಬೇಕು. ವಿದ್ಯಾರ್ಥಿಗೆ ತಿಳಿಯುವ ಬಯಕೆ ಇದ್ದರೂ ಇಂಗ್ಲಿಷಿನಲ್ಲಿ ಪ್ರಶ್ನೆ ಕೇಳಲು ಸರಿಯಾಗಿ ಬರುವುದಿಲ್ಲ. ಅದರೊಡನೆ ಇಂಗ್ಲಿಷ್ ತಪ್ಪಾದರೆ ಯಾರಾದರೂ ನಗುವರೋ ಎಂಬ ಹೆದರಿಕೆ. ಇಂತಾಗಿ ಬಾಯಿಬಿಡದೆ ತೆಪ್ಪಗೆ ಕುಳಿತಿರುತ್ತಾನೆ. ಇಂಗ್ಲಿಷನ್ನು ಕನ್ನಡದಲ್ಲಿ ಬೋಧಿಸಿದರೆ ವಿದ್ಯಾರ್ಥಿ ತನ್ನ ಸಂದೇಹಗಳನ್ನು ಪರಿಹರಿಸಿಕೊಳ್ಳಲು ಸಮರ್ಥನಾಗುತ್ತಾನೆ. ತಲೆಹರಟೆ ಎಂದು ಹೇಳಿಸಿಕೊಳ್ಳುವವರೆಗೆ ಬೇಕಾದರೂ ಪ್ರಶ್ನೆಗಳನ್ನು ಧೈರ್ಯವಾಗಿ ಕೇಳುತ್ತಾನೆ. ಆದ್ದರಿಂದ ಅವನ ಜ್ಞಾನವಿಕಾಸಕ್ಕೆ ತುಂಬ ಪ್ರಯೋಜನವಾಗುತ್ತದೆ.'' [6]

ಹೀಗಿದ್ದೂ ಇತ್ತೀಚೆಗೆ ಇಂಗ್ಲಿಷ್ ಮಾಧ್ಯಮ ಶಾಲೆಗಳು ಎಲ್ಲೆಡೆ ಹಬ್ಬದ್ದರ ಹಿನ್ನೆಲೆಯನ್ನೂ, ವಿಜ್ಞಾನ – ತಂತ್ರಜ್ಞಾನದ ಶಿಕ್ಷಣಕ್ಕೆ ಹಾಗೂ ಆ ಮೂಲಕ ದೇಶದ ಪ್ರಗತಿಗೆ ಇಂಗ್ಲಿಷ್ ಮಾಧ್ಯಮ ಶಾಲೆಗಳೇ ಸಾರ್ವತ್ರಿಕವಾಗಬೇಕು ಎಂಬ ವಾದಗಳು ಕೇಳಿಬರುತ್ತಿರುವುದರ ಹಿನ್ನೆಲೆಯನ್ನೂ ಗಮನಿಸಬೇಕು. ಮೇಲೆ ಸೂಚಿಸಿರುವಂತೆ, ವಿಷಯ ಗ್ರಹಣಕ್ಕೆ ಮಾತೃಭಾಷೆಯೇ ಅತ್ಯಂತ ಸೂಕ್ತ ಎನ್ನುವುದು ಸರ್ವವಿದಿತ. ಆದರೂ ಇಂಗ್ಲಿಷ್ ಮಾಧ್ಯಮ ಶಾಲೆಗಳ ಪರವಾದ ಒತ್ತಡಗಳು ಅತ್ಯಂತ ಪ್ರಬಲವಾಗಿರುವುದಕ್ಕೆ ಕಾರಣ ಬಹುಮಟ್ಟಿಗೂ ಶೈಕ್ಷಣಿಕ ವಿಚಾರಗಳ ಅಜ್ಞಾನ ಮತ್ತು ಬೇರೆ ಹಿತಾಸಕ್ತಿಗಳ ಒತ್ತಡ ಅನಿಸುತ್ತದೆ. ಇದರೊಂದಿಗೆ ಭಾಷಾ ಅಲ್ಪಸಂಖ್ಯಾತರ ಸಮಸ್ಯೆ, ವಲಸಿಗರ ಸಮಸ್ಯೆ, ಕೇಂದ್ರೀಯ ವಿದ್ಯಾಲಯಗಳ ಅನುಕರಣೆ, ವಸಾಹತುಶಾಹಿ ಹಾಗೂ ಇಂಗ್ಲಿಷ್ ವ್ಯಾಮೋಹಿ ಮನೋಭಾವಗಳು – ಇವೆಲ್ಲವೂ ಸೇರಿಕೊಂಡು ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸುತ್ತವೆ. ಮುಂದಿನ ಎರಡು ಸಮಸ್ಯೆಗಳೊಂದಿಗೆ ಈ ವಿಚಾರವನ್ನು ಹೋಲಿಸಿ ನೋಡಬಹುದು.

## 3. ಭಾಷಾವ್ಯಾಪ್ತಿ ಮತ್ತು ಭಾಷಾನೀತಿ

ಭಾಷಾವ್ಯಾಪ್ತಿ ಮತ್ತು ಅದನ್ನು ಅವಲಂಬಿಸಿ ರೂಪಿಸಬೇಕಾದ ಭಾಷಾನೀತಿಯು ಕುರಿತ ಸಮಸ್ಯೆ ಇನ್ನಿತರ ಹಲವು ಸಮಸ್ಯೆಗಳಿಗೆ ಕಾರಣವಾಗಿದೆ. ಭಾಷಾ ಸಮಸ್ಯೆಗಳಲ್ಲಿ ಇದನ್ನು ಒಂದು ಮೂಲವಿಚಾರ ಎಂದೂ ಹೇಳಬಹುದು. ಮುಖ್ಯವಾಗಿ ಇದು ಬಹು ಭಾಷಾ ಸಂದರ್ಭದಲ್ಲಿ ಏಳುತ್ತದೆ. ಈ ಸಮಸ್ಯೆಯನ್ನು ಪರಿಶೀಲಿಸುವಾಗ ಈ ಕೆಲವು ವಿಷಯಗಳು ಮುಖ್ಯವಾಗುತ್ತವೆ:

1. ಜಗತ್ತನ್ನು ಒಂದು ಘಟಕವಾಗಿ ತೆಗೆದುಕೊಂಡರೆ, ಅದರಲ್ಲಿ ಸುಮಾರು 3,000 ಭಾಷೆಗಳಿವೆ. ಎಲ್ಲ ಭಾಷೆಗಳೂ ಪರಸ್ಪರ ಕೊಡು-ಕೊಳ್ಳುವಿಕೆಗಳಿಂದ ವ್ಯವಹರಿಸುತ್ತವೆಯೆಂದಾಗಲಿ, ಅಂಥ ವ್ಯವಹಾರ ಆಧುನಿಕ ಜಗತ್ತಿನಲ್ಲಿ ಅನಿವಾರ್ಯವೆಂದಾಗಲಿ ಹೇಳಲಾರೆವು. ಆಯಾ ಭಾಷೆಗಳು ಆಯಾ ಪ್ರದೇಶದ, ಜನಾಂಗದ ಭಾಷೆಗಳಾಗಿ ಇರಬಲ್ಲವು; ಸಾಧ್ಯವಾದಷ್ಟು ಅನ್ಯಭಾಷೆಗಳೊಂದಿಗೆ ಕೊಡುಕೊಳ್ಳುವಿಕೆ ನಡೆಸಬಲ್ಲವು. ಅದು ಆಯಾ ಭಾಷೆಗಳ ಶ್ರೀಮಂತಿಕೆಯನ್ನು ನಿರ್ಧರಿಸಬಹುದು. ಆದರೆ ಜ್ಞಾನಗಳ, ವಸ್ತುಗಳ, ವಿಷಯಗಳ ವಿನಿಮಯ ಅತ್ಯಂತ ಅವಶ್ಯಕವೆಂದು ಬಯಸುವುದು ತಪ್ಪಲ್ಲ. U.N.O. ಮೊದಲಾದ ಜಾಗತಿಕ ನಿಯಂತ್ರಣ ವ್ಯವಸ್ಥೆಯೊಳಗೆ ಒಂದೇ ಭಾಷೆಯ ವ್ಯವಹಾರ ಅವಶ್ಯವಾಗುತ್ತದೆ.

2. ಜಗತ್ತೆಂದರೆ ಹಲವು ದೇಶಗಳಿಂದ ಕೂಡಿದ, ಹಲವಾರು ವೈವಿಧ್ಯಗಳಿಂದ ಕೂಡಿದ ದೇಶಗಳಿರುವ ಒಂದು ಸ್ಥಿತಿ ಎಂದೆನ್ನುವಾಗ, ಆ ದೇಶಗಳ ಭಾಷೆಗಳು ಮುಖ್ಯವಾಗುತ್ತವೆ. ಆ ದೇಶಗಳಲ್ಲಿ ಒಂದೊಂದೇ ಭಾಷೆ ಅಸ್ತಿತ್ವದಲ್ಲಿರಬೇಕೆಂದೇನೂ ಇಲ್ಲ. ಆದರೆ ಹಲವು ದೇಶಗಳಲ್ಲಿ ಒಂದೊಂದೇ ಭಾಷೆಯಿರುವುದು ನಿಜ. ಹಾಗೆಂದುಕೊಂಡು ಒಂದು ದೇಶದೊಳಗೆ ವಿವಿಧ ಭಾಷೆಗಳಿರುವ ಸಾಧ್ಯತೆಯನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ.

3. ಒಂದು ದೇಶದೊಳಗೆ ಹಲವು ಪ್ರಾಂತಗಳಿರುತ್ತವೆ. ದೇಶದ ಒಂದು ಘಟಕವಾಗಿ ಕರ್ನಾಟಕದಂತಹ ಒಂದು ಭಾಷಾವಾರು ಪ್ರಾಂತ್ಯವಿರುತ್ತದೆ. ಈ ಪ್ರಾಂತದಲ್ಲಿ

ನೂರಕ್ಕೆ ನೂರು ಮಂದಿ ಕನ್ನಡಿಗರೇ ಇರುವುದು ಸಾಧ್ಯವಿಲ್ಲ. ಏಕೆಂದರೆ ಭೌಗೋಳಿಕವಾಗಿ ಗೆರೆ ಎಳೆದು ಭಾಷಿಕ ಎಲ್ಲೆಗಳನ್ನು ನಿರ್ಣಯಿಸುವುದು ಸಾಧ್ಯವಿಲ್ಲ. ಆದರೆ ಪ್ರಾಂತ ವ್ಯವಸ್ಥೆಯಲ್ಲಿ ಹಾಗೆ ಗೆರೆ ಎಳೆದು ಮೇರೆಗಳನ್ನು ನಿರ್ಣಯಿಸುವುದು ಅನಿವಾರ್ಯವಾಗಿರುವುದರಿಂದ ಗಡಿಯ ಆಚೀಚೆ ಅನ್ಯಭಾಷೆಯ ಜನರು ಇರುವುದು ಸಹಜ. ಆದ್ದರಿಂದ ಒಂದು ರಾಜ್ಯದಲ್ಲಿ ಇತರ ಭಾಷೆಯನ್ನಾಡುವವರು ಇದ್ದೇ ಇರುತ್ತಾರೆ. ಅದಲ್ಲದೆ ಭೌಗೋಳಿಕವಾಗಿ ಹಾಗೂ ಜನಸಂಖ್ಯಾದೃಷ್ಟಿಯಿಂದ ಅನೇಕ ಚಿಕ್ಕ ಚಿಕ್ಕ ಭಾಷೆಗಳು ಒಂದು ರಾಜ್ಯದೊಳಗೆ, ಅದರ ಮುಖ್ಯ ಭಾಷೆಯ ನಡುವೆ ಹಲವಿರಬಹುದು. ಆಗ ಆ ಚಿಕ್ಕ ಚಿಕ್ಕ ಘಟಕಗಳನ್ನು ಬೇರೆ ಬೇರೆ ರಾಜ್ಯಗಳನ್ನಾಗಿ ಮಾಡುವುದು ಸಾಧ್ಯವಿಲ್ಲ. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶ:— ಭೌಗೋಳಿಕವಾಗಿ ಮಾತ್ರ ಭಾಷೆಯನ್ನು ವರ್ಗೀಕರಿಸಲು ಸಾಧ್ಯವಿಲ್ಲ. ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಭಾಷಾ ವೈವಿಧ್ಯತೆಯಿರಬಹುದು. ಆದ್ದರಿಂದ, ಪ್ರಾಂತ ರಚನೆಗೆ ಸಾಕಾಗುವಷ್ಟು ಜನಸಂಖ್ಯೆ ಒಂದೆಡೆಯಿರುವ ಭಾಷೆಗಳನ್ನು ಮಾತ್ರ ಭಾಷಾವಾರು ಪ್ರಾಂತರಚನೆಯಲ್ಲಿ ಸೇರಿಸುವುದು ಅಗತ್ಯವಾಗುತ್ತದೆ. ಹಾಗಾಗಿ, ಒಂದು ರಾಜ್ಯದೊಳಗೂ ಹಲವು ಭಾಷೆ, ಉಪಭಾಷೆಗಳಿರುವ ಸಾಧ್ಯತೆಯಿದೆ. ಬೇರೆ ಬೇರೆ ದೇಶಗಳ ಭಾಷೆಗಳೊಳಗೆ ನಡೆಯುವ ಪರಸ್ಪರ ಸಂಪರ್ಕಕ್ಕಿಂತ ದೇಶದೊಳಗೇ ಇರುವ ಹಲವು ಭಾಷೆಗಳ ನಡುವೆ ಸಂಪರ್ಕ, ವ್ಯವಹಾರ — ವಿನಿಮಯ ಹೆಚ್ಚು; ಅದು ಅನಿವಾರ್ಯವೂ ಹೌದು.

4. ರಾಜ್ಯದೊಳಗಿನ ಆಡಳಿತ ವ್ಯವಸ್ಥೆಯಾದ ಜಿಲ್ಲೆಗಳು ಒಂದೊಂದು ಬಗೆಯ ಭಾಷಾ ಪ್ರಭೇದಗಳನ್ನೋ, ಒಂದೊಂದು ಬಗೆಯ ಉಪಭಾಷೆಗಳನ್ನೋ ಹೊಂದಿರಬಹುದು. ಆದರೆ ಒಟ್ಟು ಪ್ರಾಂತಕಲ್ಪನೆಯೇ ಜಿಲ್ಲಾ ಕಲ್ಪನೆಗಿಂತ ಪ್ರಬಲವಾಗಿರುವುದರಿಂದಲೂ, ಜಿಲ್ಲೆ — ಜಿಲ್ಲೆಗಳ ನಡುವೆ ಸಂಪರ್ಕ, ಸಾರಿಗೆ ವ್ಯವಸ್ಥೆ, ವ್ಯವಹಾರಗಳು ಅತ್ಯಂತ ನಿಕಟವಾಗಿರುವುದರಿಂದಲೂ ಇಲ್ಲಿನ ವೈವಿಧ್ಯತೆ ಗೌಣವಾಗಿರುತ್ತದೆ.

ಇಲ್ಲಿ ಸರಕಾರ ರಚನೆ ಹಾಗೂ ಆಡಳಿತ ದೃಷ್ಟಿಯಿಂದ ಭಾಷಾ ವೈವಿಧ್ಯತೆ ಹಾಗೂ ಅದರ ಬಳಕೆಯ, ವಿನಿಮಯದ ಅವ್ಯಕತೆಯನ್ನು ಹಂತಹಂತವಾಗಿ ಗಮನಿಸುತ್ತಾ ಬರಲಾಗಿದೆ. ದೊಡ್ಡ ಘಟಕದಿಂದ ಚಿಕ್ಕ ಘಟಕಕ್ಕೆ (ಜಗತ್ತಿನಿಂದ ಒಂದು ಜಿಲ್ಲೆಯವರೆಗೆ)

ಬಂದಂತೆಲ್ಲ ಭಾಷೆಗಳ ನಡುವಿನ ಪರಸ್ಪರ ಸಂಪರ್ಕ, ವಿನಿಮಯ, ವ್ಯವಹಾರ ಹೆಚ್ಚು ನಿಕಟವಾಗುತ್ತದೆ ಹಾಗೂ ಹೆಚ್ಚು ಸಾಮರಸ್ಯದಾಯಕವಾಗಿರುತ್ತದೆ. ಇದಕ್ಕೆ ಕಾರಣ –

1) ಭೌಗೋಳಿಕ ವ್ಯಾಪ್ತಿ ಹೆಚ್ಚಾಗಿರುವುದರ ಅನನುಕೂಲತೆ ಮತ್ತು ಕಡಿಮೆಯಾಗಿರುವುದರ ಅನುಕೂಲತೆ.

2) ಭೌಗೋಳಿಕ ಕಾರಣವನ್ನು ಅವಲಂಬಿಸಿ ಉಂಟಾಗಿರುವ ಮಾನಸಿಕ ಸಾಮೀಪ್ಯ ಹಾಗೂ ಅಸಾಮೀಪ್ಯಗಳ ನಡುವಿನ ಅಂತರ (ಕರ್ನಾಟಕ ದೊಳಗೆ ಮಾತ್ರ ಗಮನಿಸುವಾಗ ಜಿಲ್ಲೆ – ಜಿಲ್ಲೆಗಳ ನಡುವಿನ ಅಂತರ ಮುಖ್ಯವಾಗುತ್ತದೆ. ಇದೇ ರೀತಿ ಭಾಷೆಯ ಪ್ರಭೇದಗಳೊಳಗೆ ಕೂಡ. ಆದರೆ ಭಾರತದ ಹಿನ್ನೆಲೆಯಲ್ಲಿ ಕರ್ನಾಟಕದ ಭಾಷಾ ಪ್ರಭೇದಗಳೊಳಗಿನ ಅಂತರ ಗೌಣವಾಗಿ, ಅದರ ಏಕರೂಪತೆ ಮುಖ್ಯವಾಗುತ್ತದೆ. ಇದೇ ರೀತಿ ಯಲ್ಲಿ, ಭಾರತದೊಳಗೆ ಪ್ರಾಂತವೈವಿಧ್ಯ ಮುಖ್ಯವಾದರೆ, ಅಂತರರಾಷ್ಟ್ರೀಯ ಮಟ್ಟದಲ್ಲಿ ಅದು ಗೌಣವಾಗುತ್ತದೆ.)

ಭಾಷೆಗಳಿಗೂ ಈ ಆಡಳಿತ ಘಟಕಗಳಿಗೂ ಇರುವ ಸಂಬಂಧ ಹಾಗೂ ಹೋಲಿಕೆಗಳನ್ನು ಇಲ್ಲಿ ಗಮನಿಸಬಹುದು. ಆಡಳಿತ ಘಟಕಗಳು ಅನೇಕ ಸಲ ಕೃತಕ ವಿಭಜನೆಯಾಗಬಹುದು; ಕೆಲವು ಸಂದರ್ಭಗಳಲ್ಲಿ ಮಾತ್ರ ಜನಾಂಗ, ಸಂಸ್ಕೃತಿ, ಭಾಷೆ, ಇತ್ಯಾದಿಗಳಿಗನುಸಾರವಾಗಿರ ಬಹುದು. ಭಾಷೆಗಳು ಅದರೊಂದಿಗೆ ಹೊಂದಿಕೊಂಡಿರಬೇಕೆಂದೇನೂ ಇಲ್ಲ. ಉದಾಹರಣೆಗೆ, 'ಒಂದು ಭಾರತ' ವೆಂಬ ಕಲ್ಪನೆಯೇ ಇಲ್ಲಿನ ಭಾಷಾ ವೈವಿಧ್ಯತೆಯೊಂದಿಗೆ ಹೊಂದುವುದಿಲ್ಲ.

ಆದರೆ ಭಾರತದ ಪ್ರಾಂತಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ, ಭಾಷೆಗೂ ಪ್ರಾಂತಕ್ಕೂ ಬಹಳಷ್ಟು ಹೊಂದಾಣಿಕೆಯಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ, ಭಾಷೆಯನ್ನಾಧರಿಸಿ ಪ್ರಾಂತರಚನೆ ಮಾಡಿದ್ದೇ ಆಗಿದೆ. ಅಂದರೆ, ಜಗತ್ತಿನ ಆಡಳಿತ ಘಟಕ ಗಳಿಗೂ ಭಾಷಾವ್ಯಾಪ್ತಿಯ ಭೌಗೋಳಿಕ ಘಟಕಗಳಿಗೂ ಸಂಬಂಧವಿರಬಹುದು ಅಥವಾ ಇಲ್ಲದಿರಬಹುದು – ಎಂಬುದು ಸ್ಪಷ್ಟವಾದ ಸಂಗತಿಯಾಗಿದೆ. ಇವುಗಳ ನಡುವಿನ ಹೋಲಿಕೆ ಯನ್ನು ಗಮನಿಸುವಾಗ, ಆಡಳಿತ ಘಟಕಗಳಲ್ಲೂ ಭಾಷಾಪ್ರದೇಶದ ಘಟಕಗಳಲ್ಲೂ

ಒಂದೇ ಬಗೆಯ ಸ್ವಭಾವವನ್ನು ಗುರುತಿಸಬಹುದು: ಆಡಳಿತ ಘಟಕಗಳಲ್ಲಿ ಕಂಡು ಬಂದಂತೆ — ದೊಡ್ಡ ಘಟಕದಿಂದ ಸಣ್ಣ ಘಟಕಕ್ಕೆ ಹಂತಹಂತವಾಗಿ ಬಂದಂತೆಲ್ಲ ಜನರ ವ್ಯವಹಾರ, ಸಂಪರ್ಕ ಹಾಗೂ ಭಾವನೆಗಳು ಗಾಢವಾಗುತ್ತ ಬರುವುದು; ಈ ಸ್ವಭಾವ ಭಾಷಾ ಘಟಕಗಳಲ್ಲೂ ಅದೇ ರೀತಿಯದಾಗಿದೆ. ಜಾಗತಿಕ ದೃಷ್ಟಿಯಿಂದ ಅನೇಕ ಭಾಷೆಗಳಿವೆ, ಪರಸ್ಪರ ಹೆಸರೂ ಕೇಳದಿರಬಹುದು; ಪ್ರಪಂಚದ ಒಂದು ಮೂಲೆಯ ಭಾಷೆಯನ್ನು ಇನ್ನೊಂದು ಮೂಲೆಯ ಜನ ಕೇಳದೆಯೂ ಇರಬಹುದು. ಅಲ್ಲಿ ಒಂದಕ್ಕೊಂದು ಪರಕೀಯ; ಪರಸ್ಪರ ಗುರುತಿಸುವಿಕೆ ಕೂಡ ಅನಗತ್ಯವಾಗುತ್ತದೆ. ಆದರೆ ಒಂದೇ ಭಾಷಾವರ್ಗಕ್ಕೆ ಸೇರಿದ ಹಲವು ಭಾಷೆಗಳ ನಡುವೆ ಪರಸ್ಪರ ಸಂಪರ್ಕ ಸಾಧ್ಯ (ಅವು ಒಂದೇ ಭೂಗೋಳಿಕ ಕ್ಷೇತ್ರದಲ್ಲಿ ಹರಡಿರುವ ಸಾಧ್ಯತೆಯೂ ಇರುವುದರಿಂದ); ಹಾಗೆಯೇ ಪರಸ್ಪರ ವಿನಿಮಯ, ವ್ಯವಹಾರ ಕೂಡ ಸಾಧ್ಯ. ಇಲ್ಲಿ ಸ್ವಲ್ಪವಾದರೂ ಅರ್ಥೈಸುವಿಕೆ, ಗುರುತಿಸುವಿಕೆ ನಡೆಯಬಹುದು. ಇನ್ನು, ಒಂದೇ ಭಾಷೆಯ ಹಲವು ಉಪಭಾಷೆಗಳೊಳಗೆ ಇದು ಇನ್ನಷ್ಟು ಗಾಢವಾಗುತ್ತದೆ. ಒಂದೇ ಭಾಷೆಯ ಪ್ರಭೇದಗಳೊಳಗೆ ವ್ಯತ್ಯಾಸ ಗುರುತಿಸುವಂತಿದ್ದರೂ ಕೂಡ ಅದನ್ನು ಮರೆತು, ಒಂದೇ ಭಾಷೆಯೆಂದು ವ್ಯವಹರಿಸುತ್ತೇವೆ. ಈ ಬಗೆಯಲ್ಲಿ, ಬೇರೆ ಬೇರೆ ಘಟಕಗಳನ್ನು ಹಂತ ಹಂತವಾಗಿ ಗಮನಿಸಿದಾಗ ಇಲ್ಲಿ ಮಾನವ ಸ್ವಭಾವದ ಕೆಲವು ಗುಣಗಳನ್ನು ಗುರುತಿಸಬಹುದು.

ಅ) ವ್ಯಾಪ್ತಿ ಚಿಕ್ಕದಾಗುತ್ತಾ ಹೋದಂತೆ ಏಕತೆ, ಸಾಮರಸ್ಯ, ಆತ್ಮೀಯತೆ ಹೆಚ್ಚುತ್ತ ಹೋಗುತ್ತದೆ ಹಾಗೂ ಆ ವ್ಯಾಪ್ತಿಯಾಚಿನದನ್ನು ಪ್ರತ್ಯೇಕಿಸುತ್ತದೆ, ಆ ಮೂಲಕ ತಾನು ಪ್ರತ್ಯೇಕಗೊಳ್ಳುತ್ತಾ ಹೋಗುತ್ತದೆ; ಪ್ರತ್ಯೇಕವಾಗಿ ಗುರುತಿಸಲ್ಪಡುತ್ತದೆ.

ಆ) ಇದಕ್ಕೆ ವಿಪರೀತವಾಗಿ, ವಿಸ್ತಾರವಾಗುತ್ತಾ ಹೋದಂತೆ ಸಾಮರಸ್ಯ, ಆತ್ಮೀಯತೆ ಸಡಿಲವಾಗುತ್ತದೆ, ಅಂತೆಯೇ ತನ್ನ ಅಸ್ತಿತ್ವದ (ಸಾಮರಸ್ಯ, ಏಕತೆ ಇತ್ಯಾದಿಗಳಿಂದ ಪಡೆದ) ವ್ಯಾಪ್ತಿ ಹೆಚ್ಚುತ್ತದೆ; ಆ ವ್ಯಾಪ್ತಿಯಾಚಿನದು ಹಿರಿದಾಗುತ್ತ ಹೋಗುತ್ತದೆ; ಗುರುತಿಸುವಿಕೆ ಕೂಡ ಹೆಚ್ಚು ವ್ಯಾಪಕವಾಗುತ್ತದೆ.

ಈ ಕೆಲವು ಹಿನ್ನೆಲೆಗಳಿಂದ ಭಾಷಾನೀತಿ ರೂಪಿಸುವ ಸಮಸ್ಯೆಗಳನ್ನು ಪರಿಶೀಲಿಸಬಹುದು.

ಭಾಷಾನೀತಿ ರೂಪಿಸುವವರ ಹಿಂದಿನ ಕಾಳಜಿಯೇನೆಂಬುದನ್ನು ಗಮನಿಸೋಣ. ಉತ್ತಮ ವ್ಯವಹಾರ, ಉತ್ತಮ ಶಿಕ್ಷಣ, ಉತ್ತಮ ಜನಜೀವನ — ಇದು ಎಲ್ಲರ ಗುರಿ. ಆದರೆ ಇಷ್ಟೇ ಅಲ್ಲ; ಇದರೊಂದಿಗೆ ಇನ್ನು ಕೆಲವು ಹಿತಾಸಕ್ತಿಗಳೂ ಸೇರಿಕೊಳ್ಳುತ್ತವೆ. 'ಇಂಗ್ಲಿಷ್ ಭಾಷೆಯನ್ನೇ ಕಲಿಸಬೇಕು, ಅದರಿಂದ ಮಾತ್ರ ಜಗತ್ತಿನ ಎಲ್ಲ ಅರಿವೂ ಸಾಧ್ಯ, ಅದರಿಂದ ಜಾಗತಿಕ ಮಟ್ಟದಲ್ಲಿ ಭಾರತ ತಲೆಯೆತ್ತಲು ಸಾಧ್ಯ, ಪ್ರಪಂಚ ಒಂದಾಗಲು ಸಾಧ್ಯ' — ಎಂಬ ಅಭಿಪ್ರಾಯದಲ್ಲಿ ಜಾಗತಿಕ ಏಕತೆಯ ಹಂಬಲವಿದೆ. ಆದರೆ ಅದು ಇಂಗ್ಲಿಷಿನ ಮೂಲಕ ಮಾತ್ರವೇ ಸಾಧ್ಯ — ಎಂಬ ಭಾವನೆಯೂ ಇದೆ. ಹಾಗೆಯೇ, 'ಭಾರತದಲ್ಲಿ ಹೆಚ್ಚು ಮಂದಿ ಆಡುವ ಭಾಷೆ ಹಿಂದಿಯಾಗಿರುವುದರಿಂದ ಅದನ್ನೇ ಉಳಿದವರೂ ಆಡಬೇಕು, ಕಲಿಯಬೇಕು, ರಾಷ್ಟ್ರೀಯ ಏಕತೆಯನ್ನು ಸಾಧಿಸಬೇಕು' — ಎಂಬಲ್ಲಿ ದೇಶದ ಏಕತೆಯ ಹಂಬಲವಿದೆ; ಅಂತೆಯೇ, ಅದು ಹಿಂದಿಯ ಮೂಲಕ ಮಾತ್ರ ಸಾಧ್ಯ — ಎಂಬ ನಂಬಿಕೆಯಿದೆ. ಇದನ್ನೇ ಕರ್ನಾಟಕಕ್ಕೂ ಅನ್ವಯಿಸುವುದಾದರೆ, 'ಇಲ್ಲಿನ ಭಾಷಾ ಅಲ್ಪಸಂಖ್ಯಾತರೆಲ್ಲ ಕನ್ನಡವನ್ನೇ ಆಡಬೇಕು, ಕನ್ನಡವನ್ನೇ ಕಲಿಯಬೇಕು, ಆ ಮೂಲಕ ಕರ್ನಾಟಕ ಒಂದೇ ಭಾಷೆಯ ರಾಜ್ಯವಾಗಬೇಕು' — ಎಂಬ ಮಾತಿನಲ್ಲೂ ಇಂತಹದೇ ಏಕತೆಯ ಹಂಬಲ ಹಾಗೂ ಅದು ಕನ್ನಡದ ಮೂಲಕ ಮಾತ್ರ ಸಾಧ್ಯ ಎಂಬ ನಂಬಿಕೆಯಿದೆ.

ಜಾಗತಿಕ ಏಕತೆ, ರಾಷ್ಟ್ರೀಯ ಏಕತೆ, ಪ್ರಾಂತೀಯ ಏಕತೆ — ಈ ಎಲ್ಲ ಹಂಬಲಗಳ ಮೂಲ ಒಂದೇ — ಏಕತೆಯಿಂದ ಜನಜೀವನ ಒಳ್ಳೆಯದಾಗಬಹುದು; ಜನತೆ ಶಕ್ತಿ ಸಾಮರ್ಥ್ಯ ಹೊಂದಬಹುದು — ಎಂಬುದು. ಈ ಹಂಬಲ ಹಾಗೂ ಆದರ್ಶ ಒಳ್ಳೆಯದೇ ಆದರೂ ಇದು ಇಂಥ ಭಾಷೆಯಿಂದಲೇ ಸಾಧ್ಯವಾಗಬೇಕು — ಇಂಗ್ಲಿಷ್, ಹಿಂದಿ, ಅಥವಾ ಕನ್ನಡದ ಮೂಲಕವೇ ಸಾಧ್ಯ — ಎಂದ ತಕ್ಷಣ ಆ ಹಂಬಲವು ತನ್ನ ಪ್ರಾಮಾಣಿಕ ಸ್ವರೂಪವನ್ನು ಕಳೆದುಕೊಳ್ಳುತ್ತದೆ. ಆಗ ಅದು ಆಕ್ರಮಣಕಾರಿ ಮನೋಭಾವವನ್ನು ತಾಳಿಕೊಳ್ಳುತ್ತದೆ. ಏಕತೆಗಾಗಿ ಒಂದು ಭಾಷೆಯ ಹೇರಿಕೆ ನಡೆದಾಗ, ಅದರಿಂದ ಇನ್ನೊಂದು ಭಾಷೆಯ ಬೆಳವಣಿಗೆಗೆ ಉಂಟಾಗುವ ಧಕ್ಕೆ ಕಡಿಮೆಯಲ್ಲ. ಸುಕಟನ್ಯಾಬ್ ಕಾಂಗಾಸ್

ಹೇಳುತ್ತಾರೆ: ''ಅನೇಕ ಅಲ್ಪಸಂಖ್ಯಾತ ಗುಂಪುಗಳಿಗೆ ಮಾತೃಭಾಷೆಯೆಂಬುದು ತಮ್ಮತನದ ಕಲ್ಪನೆಯ ಹೃದಯಸ್ಥಾನವಾಗಿರುತ್ತದೆ. ಮಾತೃಭಾಷೆಯು ಅವರ ಮುಖ್ಯ ಸಾಂಸ್ಕೃತಿಕ ಮೌಲ್ಯಗಳಲ್ಲೊಂದು ಮಾತ್ರವಲ್ಲ, ಅವರ ಜನಾಂಗದ ತಳಹದಿಯೇ ಆಗಿರುವ ಅತಿಮುಖ್ಯ ಸಂಗತಿಯಾಗಿರುತ್ತದೆ. ಮಾತೃಭಾಷೆಯನ್ನು ಕಳೆದುಕೊಂಡಾಗ ಅವರ ಸಾಂಸ್ಕೃತಿಕ ಚಹರೆಯೇ ಕಳೆದು ಹೋಗುತ್ತದೆ. ಆ ಜನಾಂಗದ ಆತ್ಮದ ಹತ್ಯೆಯಾಗುತ್ತದೆ''[7] ಅದು ತಾತ್ಕಾಲಿಕವಾಗಿ ನಾಶವಾಗುವ ಹಂತ ತಲುಪಬಹುದು; ಆದರೆ ತೀವ್ರ ಪ್ರತಿಭಟನೆಯೊಂದಿಗೆ ತಲೆಯೆತ್ತುವ ಸಾಧ್ಯತೆಯಿದೆ. (ಉದಾ: ಶ್ರೀಲಂಕೆಯಲ್ಲಿ ತಮಿಳು; ಬಾಸ್ಕ್; ಇಸ್ರೇಲಿನಲ್ಲಿ ಹೀಬ್ರೂ — ಇತ್ಯಾದಿ.) ಅದು ಪ್ರತ್ಯೇಕತಾವಾದಕ್ಕೆ ಕಾರಣವಾಗಬಹುದು.

ಭಾಷೆಗಳ ಚರಿತ್ರೆಯಿಂದ ಕಂಡುಬರುವ ವಿದ್ಯಮಾನದ ಹಿಂದಿರುವ ಸಾಮಾನ್ಯ ನಿಯಮವಿಷ್ಟೇ: ಒಂದು ಭಾಷೆಯನ್ನು ಹಿಡಿತದಲ್ಲಿಡುವುದು ಹಾಗೂ ಅದರ ನಾಶದ ಮೂಲಕ ಇನ್ನೊಂದು ಭಾಷೆಯ ಅಭಿವೃದ್ಧಿಯನ್ನು ಬಯಸುವುದು ಪ್ರತ್ಯೇಕತಾವಾದಕ್ಕೆ ಬೀಜ ಬಿತ್ತಿದಂತೆಯೇ. ನಿಜವಾದ ಏಕತೆ ಸಾಧ್ಯವಾಗುವುದು ಭಾಷಾ ಹೇರಿಕೆಯಿಂದಲ್ಲ; ಭಾಷಾಪ್ರೋತ್ಸಾಹದಿಂದ. ಭಾಷಾವೈವಿಧ್ಯವನ್ನು ಒಪ್ಪಿಕೊಂಡಾಗಲೇ ಎಲ್ಲ ಭಾಷೆಗಳೂ ಒಂದೇ ಮಾನವ ಜನಾಂಗದ್ದು — ಎಂಬ ಸತ್ಯದ ಅರಿವಾಗುವುದು ಸಾಧ್ಯ.

## 4. ಕೆಲವು ರಾಜಕೀಯ, ಸಾಮಾಜಿಕ ಸಮಸ್ಯೆಗಳು

ಬಹುಭಾಷೆಗಳಿರುವಲ್ಲಿ ಅನಿವಾರ್ಯವಲ್ಲದಿದ್ದರೂ ರಾಜಕೀಯ, ಸಾಮಾಜಿಕ ಕಾರಣಗಳಿಂದ ಇನ್ನೂ ಕೆಲವು ಭಾಷಾಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಇಲ್ಲಿ ಭಾಷೆಗಳು ರಾಜಕೀಯ ಅಸ್ತ್ರವಾಗಿ ಬಳಕೆಯಾಗುತ್ತದೆ. ಉದಾಹರಣೆಗೆ, ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಇಂಗ್ಲಿಷ್ ಭಾಷೆ ವಸಾಹತುಶಾಹಿ ವ್ಯವಸ್ಥೆಯನ್ನು ಹೇರಲು ಪ್ರಬಲ ಸಾಧನವಾಗಿತ್ತು. ಅದೇ ರೀತಿ, ಇಂದಿನ ಪರಿಸ್ಥಿತಿಯಲ್ಲಿ ಅಲ್ಪಸಂಖ್ಯಾತ ಭಾಷೆಗಳನ್ನು ರಾಜಕೀಯ ಅಗತ್ಯಗಳಿಗಾಗಿ ಬಳಸಿಕೊಳ್ಳಲಾಗುತ್ತಿದೆ. ಕರ್ನಾಟಕದಲ್ಲಿ ಮರಾಠಿ, ತಮಿಳು, ತೆಲುಗುಭಾಷೆಗಳನ್ನು ಪ್ರೋತ್ಸಾಹಿಸಿದಷ್ಟೂ ಅವುಗಳ ಪ್ರತ್ಯೇಕತಾವಾದ ಬೆಳೆಯುತ್ತಿದೆ. ಇದಕ್ಕೆ ಕಾರಣ, ಅಲ್ಪಸಂಖ್ಯಾಕ ಭಾಷೆಗಳಿಗೆ ಪ್ರೋತ್ಸಾಹ ನೀಡಿದ ಹಾಗೆಲ್ಲ ಅವು ಪ್ರತ್ಯೇಕ ದ್ವೀಪಗಳಾಗಿ ನಿಲ್ಲುತ್ತವೆ ಎಂಬುದಲ್ಲ, ಅವುಗಳಿಗೆ ಪ್ರೋತ್ಸಾಹ ನೀಡದಿದ್ದಾಗಲೇ ಪ್ರತ್ಯೇಕವಾದ ಬೆಳೆಯುತ್ತವೆ ಎಂಬುದನ್ನು ಈ ಮೊದಲು ಚರ್ಚಿಸಲಾಗಿದೆ. ಇಲ್ಲಿ ಬೇರೆ ಸಮಸ್ಯೆ ಸೇರಿಕೊಂಡಿರುವುದೇ ಈ ವಿರುದ್ಧಗತಿಯ ಪರಿಣಾಮಕ್ಕೆ ಕಾರಣ. ರಾಜಕೀಯ ಲಾಭಕ್ಕಾಗಿ ಆ ಭಾಷೆಗಳನ್ನು ಪ್ರತ್ಯೇಕಗೊಳಿಸಲಾಗುತ್ತದೆ. ಪ್ರಧಾನ ಭಾಷೆಯೊಂದಿಗೆ ಸಂಬಂಧ ಕದಡುವಂತೆ ಹಲವು ಸಮಸ್ಯೆಗಳನ್ನು ಹುಟ್ಟುಹಾಕಲಾಗುತ್ತದೆ. ಸಾಂಸ್ಕೃತಿಕ ವಿಚಾರಗಳು, ಧಾರ್ಮಿಕತೆ, ಅಭಿಮಾನ — ಎಲ್ಲವನ್ನೂ ಇದಕ್ಕೆ ಬಳಸಿಕೊಳ್ಳಬಹುದು. ಹೀಗೆ ಪ್ರತ್ಯೇಕವಾಗಿ ಗುರುತಿಸಲ್ಪಡುವ ಭಾಷೆಗೂ ಪ್ರಧಾನಭಾಷೆಗೂ ಪೈಪೋಟಿ ನಡೆಯುವಂತಾಗುತ್ತದೆ. ಪ್ರಧಾನ ಭಾಷೆಯ ಜನರು ಅಸ್ತಿತ್ವದ ಭದ್ರತೆಯ ಬಗ್ಗೆ ಯೋಚಿಸತೊಡಗಿದ ತಕ್ಷಣವೇ ಅಲ್ಪಸಂಖ್ಯಾಕ ಭಾಷೆಯನ್ನು ದ್ವೇಷಿಸಲಾರಂಭಿಸುತ್ತಾರೆ. ಇದರಿಂದ ಜನಾಭಿಪ್ರಾಯ ಬದಲಾಗುತ್ತದೆ; ರಾಜಕೀಯವಾಗಿಯೂ ಭಾಷಾ ಪೈಪೋಟಿ ಮುಂದುವರಿಯುತ್ತದೆ. ಅಲ್ಪಸಂಖ್ಯಾಕ ಭಾಷೆಗಳಿಗೆ ಪ್ರೋತ್ಸಾಹ ನಿಲ್ಲುತ್ತದೆ, ಅದರಿಂದಾಗ ಸಂಘರ್ಷ ಹೆಚ್ಚುತ್ತದೆ. ಆಗ ಪ್ರಧಾನ ಭಾಷೆಯೇ ತೊಂದರೆಗೊಳಗಾಗುತ್ತದೆ. ಕರ್ನಾಟಕದಲ್ಲಿ ತಮಿಳು, ಮರಾಠಿ, ತೆಲುಗು ಭಾಷಾಸಮಸ್ಯೆಗಳಿಗೆ ಇದೂ ಒಂದು ಕಾರಣವಾಗಿದೆ.

ಪ್ರಧಾನಭಾಷೆ ಹಾಗೂ ಅಲ್ಪಸಂಖ್ಯಾಕ ಭಾಷೆಗಳೊಳಗಿನ ಸಂಘರ್ಷಕ್ಕೆ ಇದೊಂದೇ

ಕಾರಣವಲ್ಲ. ಒಂದು ಪ್ರದೇಶಕ್ಕೆ ಅನ್ಯಭಾಷಿಗರು ವಲಸೆ ಬಂದು ತುಂಬಿಹೋಗುವುದೂ ಒಂದು ದೊಡ್ಡ ಸಮಸ್ಯೆ. ಆಗ ಸ್ಥಳೀಯ ಭಾಷೆಯ ಜನರು ಅವರೊಂದಿಗೆ ಸ್ಪರ್ಧಿಸುತ್ತಾರೆ. ಅನೇಕ ವೇಳೆ ಇದು ಭಾಷೆ ಭಾಷೆಗಳ ಸಂಘರ್ಷವಾಗಿಯೇ ಕಾಣಿಸಿಕೊಳ್ಳುತ್ತದೆ. ಭಾಷಾ ಅಲ್ಪಸಂಖ್ಯಾತರು ತಮ್ಮ ಜನಾಂಗದ ಅಸ್ತಿತ್ವದ ಕುರುಹಾಗಿ ತಮ್ಮ ಭಾಷೆಯನ್ನು ಬಲಪಡಿಸುತ್ತಾರೆ. ಅವರ ವಲಸೆ ಹೆಚ್ಚಿದಷ್ಟೂ ಸ್ಥಳೀಯ ಭಾಷೆ ದುರ್ಬಲವಾಗುತ್ತದೆ. ಭಾಷಾ ಅಲ್ಪಸಂಖ್ಯಾತರ ವಲಸೆಗೆ ಆರ್ಥಿಕ ಕಾರಣಗಳೂ ಔದ್ಯೋಗಿಕ ಕಾರಣಗಳೂ ಮುಖ್ಯವಾಗಿದೆ. ಇಲ್ಲಿ ಅವರ ಸಾಮಾಜಿಕ ಸ್ಥಾನಮಾನಗಳೂ ನಿರ್ಣಾಯಕವಾಗುತ್ತವೆ. ಅನ್ಯಭಾಷಾ ವಲಸಿಗರಲ್ಲಿ ಆರ್ಥಿಕವಾಗಿ ಪ್ರಬಲವಾಗಿರುವವರೇ ಹೆಚ್ಚಿದ್ದರೆ, ಆ ಭಾಷೆ ಬಲವಾಗಿರುತ್ತದೆ; ಸ್ಥಳೀಯ ಭಾಷೆಯೊಂದಿಗೆ ಸಂಘರ್ಷಕ್ಕಿಳಿಯುತ್ತದೆ. ಅದಕ್ಕೆ ರಾಜಕೀಯ ಬೆಂಬಲವೂ ದೊರಕುತ್ತದೆ.

ಕರ್ನಾಟಕದಲ್ಲಿ ಇಂಗ್ಲಿಷ್ – ಕನ್ನಡ ಸಂಬಂಧದ ಮೇಲೆ ಅಲ್ಪಸಂಖ್ಯಾತರ ಮನೋಭಾವಗಳೂ ಪ್ರಭಾವ ಬೀರುತ್ತವೆ. ಸ್ಥಳೀಯ ಭಾಷೆಯೊಂದಿಗೆ ಸ್ಪರ್ಧಿಸುವ ಭಾಷಾ ಅಲ್ಪಸಂಖ್ಯಾತರು ಇಂಗ್ಲಿಷ್ ಮಾಧ್ಯಮ ಶಿಕ್ಷಣಕ್ಕೆ ಮಿತಿಮೀರಿದ ಪ್ರೋತ್ಸಾಹ ನೀಡುತ್ತಾರೆ. ಇಂಗ್ಲಿಷ್ ಮಾಧ್ಯಮ ಶಿಕ್ಷಣವೇ ಅತ್ಯುತ್ತಮ ಹಾಗೂ ಅದೇ ಉದ್ಯೋಗ ಪಡೆಯಲು ಅನುಕೂಲವೆಂದು ವಾದಿಸಿ, ಆ ಮೂಲಕ ಸ್ಥಳೀಯ ಭಾಷೆಯನ್ನು ಕಲಿಯುವುದರಿಂದ ತಪ್ಪಿಸಿಕೊಳ್ಳುತ್ತಾರೆ. ಇಂಗ್ಲಿಷ್ ಮಾಧ್ಯಮ ಶಾಲೆಗಳೊಂದಿಗೆ ಗುಣಮಟ್ಟದ ದೃಷ್ಟಿಯಿಂದ ಸ್ಪರ್ಧಿಸಲಾಗದ ಕನ್ನಡ ಮಾಧ್ಯಮ ಶಾಲೆಗಳು ಕ್ರಮೇಣ ದುಸ್ಥಿತಿಗಿಳಿಯುತ್ತವೆ. ಆದ್ದರಿಂದ, ಅಲ್ಪಸಂಖ್ಯಾಕ ಭಾಷೆ ಹಾಗೂ ಪ್ರಧಾನಭಾಷೆಯ ನಡುವಿನ ಸಂಘರ್ಷ 1) ರಾಜಕೀಯ ಲಾಭಕ್ಕೋಸ್ಕರ 2) ಅನ್ಯಭಾಷಿಗರ ವಲಸೆಯಿಂದ ಉಂಟಾಗುತ್ತದೆ. ಇದು ಇತರ ಭಾಷಾಸಮಸ್ಯೆಗಳಿಗೆ ಕಾರಣವಾಗುತ್ತದೆ.

ಭಾಷೆಯ ಮೂಲಕ ವಸಾಹತುಶಾಹಿ ಹಿಡಿತವನ್ನು ಸಾಧಿಸುವ ಬ್ರಿಟಿಷರ ಹಳೆಯ ತಂತ್ರವೇ ಸ್ವತಂತ್ರ ಭಾರತದಲ್ಲಿ ಬೇರೆ ರೂಪಗಳನ್ನು ಧರಿಸಿಕೊಂಡಿರುವುದು ಇನ್ನೊಂದು ಸಮಸ್ಯೆ. ಹಿಂದೆ ಆಡಳಿತವನ್ನು ಬಲಪಡಿಸಲು ದೇಶೀಯರಿಗೆ ಇಂಗ್ಲಿಷ್ ಕಲಿಸಿ ಅವರನ್ನು ಸರಕಾರಿ ಹುದ್ದೆಗಳಿಗೆ ನೇಮಿಸಿದರು.

"ಅಭಿರುಚಿ , ಅಭಿಪ್ರಾಯ, ನೈತಿಕತೆ ಮತ್ತು ಬುದ್ಧಿಶಕ್ತಿಯಲ್ಲಿ ಇಂಗ್ಲಿಷರಾಗಿರುವ" (ಮೆಕಾಲೆಯ ವರದಿ) ಒಂದು ವರ್ಗವನ್ನು ನಿರ್ಮಿಸುವ ಮೂಲಕ ಬ್ರಿಟಿಷರು ವಸಾಹತುಶಾಹಿ ತಂತ್ರವನ್ನು ಭಾರತದಲ್ಲಿ ಹುಟ್ಟುಹಾಕಿದರು. ಹಾಗೆ ನಿರ್ಮಾಣಗೊಂಡ ವರ್ಗ ಬಹುಸಂಖ್ಯೆಯಲ್ಲಿ ಮೇಲ್ವರ್ಗದವರದೇ ಆಗಿದ್ದುದರಿಂದ, ಪರಂಪರಾಗತವಾಗಿ ನಡೆಸಿಕೊಂಡು ಬಂದ ಶೋಷಣೆಯನ್ನು ಮುಂದುವರೆಕೊಂಡು ಹೋಗಲು ಹೊಸ ಅವಕಾಶ ಸಿಕ್ಕಿದಂತಾಯಿತು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶೀಯ ಜಾಗೃತಿ ಉಂಟಾದಾಗ ಈ ವಸಾಹತುಶಾಹಿ ಪ್ರಯತ್ನಗಳಿಗೆ ಹಿನ್ನಡೆ ಉಂಟಾದರೂ, ಸ್ವಾತಂತ್ರ್ಯ ನಂತರ ರಾಜಕೀಯ ಪ್ರವೇಶ ಸಾಧ್ಯವಾಯಿತು. ಅದರೊಂದಿಗೆ ಹಿಂದಿಯನ್ನು ಹೇರುವ ಕೇಂದ್ರದ ಪ್ರಯತ್ನದಿಂದಾಗಿ ಹಿಂದೀಯೇತರ ರಾಜ್ಯಗಳಲ್ಲಿ ಅದಕ್ಕೆ ವಿರುದ್ಧವಾಗಿ ಇಂಗ್ಲಿಷನ್ನು ನಿಲ್ಲಿಸಲು ಕಾರಣವಾಯಿತು. ಕೇಂದ್ರ–ರಾಜ್ಯ ಸಂಪರ್ಕ ಕೂಡ ಬಹಳ ದೊಡ್ಡ ಸಮಸ್ಯೆಯಾಗಿ ಇಂಗ್ಲಿಷ್ ಯಥಾಸ್ಥಿತಿಯಲ್ಲಿ ಮುಂದುವರಿಯಿತು. ಇಂಗ್ಲಿಷನ್ನು ಭಾರತದ ಸಹಸಂಪರ್ಕ ಭಾಷೆಯನ್ನಾಗಿ ಮಾಡಿದ್ದರಿಂದ ಅದೇ ನಿಜವಾಗಿ ಆಡಳಿತ ಭಾಷೆಯಾಯಿತು. ಅದರಿಂದುಂಟಾದ ಪರಿಣಾಮಗಳು ಜನಜೀವನವನ್ನು ವ್ಯಾಪಿಸಿದವು. ಸಹಜವಾಗಿ ಜನರಲ್ಲಿ ಇಂಗ್ಲಿಷ್ ವ್ಯಾಮೋಹ ಹೆಚ್ಚಿತು; ಆಡಳಿತದಲ್ಲಿ ಹಾಗೂ ಜನರ ಮನೋಭೂಮಿಕೆಗಳಲ್ಲಿ ವಸಾಹತುಶಾಹಿ ಹಿಡಿತ ಮುಂದುವರಿಯುತ್ತಲೇ ಬಂತು. ಆಡಳಿತ, ಶಿಕ್ಷಣ, ನ್ಯಾಯಾಲಯ, ಸಮೂಹಮಾಧ್ಯಮಗಳಲ್ಲಿ, ವಾಣಿಜ್ಯ ವ್ಯವಹಾರ ಸಂಸ್ಥೆಗಳಲ್ಲಿ ಇಂಗ್ಲಿಷನ್ನು ತೆಗೆದು ಹಾಕದಿರಲು ಇದೂ ಒಂದು ಪ್ರಬಲ ಕಾರಣವಾಗಿದೆ.

ಹೀಗೆ ನಾಲ್ಕು ಬಗೆಯಲ್ಲಿ ಗುರುತಿಸಿರುವ ಸಮಸ್ಯೆಗಳಲ್ಲಿ ಅನ್ಯಭಾಷೆಯ ಹಿಡಿತದ ಸಮಸ್ಯೆಯೇ ಹೆಚ್ಚು ಹಾನಿಕರ. ಇದು ಯಾವ ವಿಷಯದಲ್ಲೂ ಹೆಚ್ಚಿನ ಉಪಯುಕ್ತತೆಯನ್ನು ಜನರಿಗೆ ನೀಡಲಾರದು. ವಿಜ್ಞಾನ, ತಂತ್ರಜ್ಞಾನಗಳ ಮಾಧ್ಯಮವಾಗಿ ಇನ್ನೊಂದು ಭಾಷೆಯನ್ನು ಬಳಸುವುದರಿಂದ ಉಂಟಾಗುವ ಹಾನಿ ರಾಷ್ಟ್ರದ ಸೃಜನಶೀಲತೆಯನ್ನೂ ಉತ್ಪಾದನೆಯಲ್ಲಿನ ಅಭಿವೃದ್ಧಿಯನ್ನೂ ಬಾಧಿಸುತ್ತದೆ. ವಿಜ್ಞಾನ, ತಂತ್ರಜ್ಞಾನಗಳನ್ನೇ ಕಾರಣವಾಗಿಟ್ಟುಕೊಂಡು ಆರಂಭದಿಂದ ಕೊನೆಯವರೆಗೆ ಅನ್ಯಭಾಷಾ ಮಾಧ್ಯಮದಲ್ಲಿ ಶಿಕ್ಷಣ ನೀಡುವುದು ಅತ್ಯಂತ ಹಾನಿಕರವಾದೀತು. ಶಿಕ್ಷಣದಲ್ಲಿ ಭಾಷೆಗಳನ್ನು ಸಮರ್ಪಕವಾಗಿ

ಅಳವಡಿಸುವುದರಿಂದ ಇದನ್ನು ನಿವಾರಿಸುವುದು ಸುಲಭ. ಭಾಷಾವ್ಯಾಪ್ತಿ, ಭಾಷಾ ವೈವಿಧ್ಯ ಮತ್ತು ಭಾಷಾನೀತಿಯ ಸಮಸ್ಯೆ ಅತ್ಯಂತ ಜಟಿಲವಾದದ್ದು; ಆದರೆ ಸಮರ್ಪಕವಾದ ಭಾಷಾನೀತಿಯಿಂದ ಅದರ ಸಮಸ್ಯೆಗಳನ್ನು ಪರಿಹರಿಸಬಹುದು. ವಲಸೆ, ದಾಸ್ಯ, ವರ್ಗ ನಿರ್ಮಾಣ, ಭಾಷಾ ಅಲ್ಪಸಂಖ್ಯಾತರು — ಇವುಗಳೆಲ್ಲ ಸೃಷ್ಟಿಸುವ ಸಮಸ್ಯೆಗಳು ಮುಖ್ಯವಾಗಿ ಇತರ ಹಲವು ವಿದ್ಯಮಾನಗಳೊಂದಿಗೆ ಸಂಪರ್ಕ ಹೊಂದಿವೆ. ಆದರೆ ಅವು ಒಂದು ಭಾಷೆಯ ಅಸ್ತಿತ್ವಕ್ಕೆ ಅತ್ಯಂತ ಹಾನಿಯನ್ನುಂಟುಮಾಡುತ್ತವೆ.

ಕನ್ನಡ — ಇಂಗ್ಲಿಷ್ ಸಂಬಂಧದ ಕುರಿತು ಚಿಂತಿಸುವಾಗ ಈ ನಾಲ್ಕು ಸಮಸ್ಯೆಗಳೂ ಸೇರಿಕೊಂಡು ಬಹಳ ಜಟಿಲವಾದ ಪರಿಸ್ಥಿತಿಯನ್ನು ನಿರ್ಮಿಸಿವೆ. ಕರ್ನಾಟಕದಲ್ಲಿ ಇಂಗ್ಲಿಷ್ ಭಾಷೆಯ ಅಗತ್ಯವನ್ನು ಪ್ರಶ್ನಿಸುವಾಗ ಅದರ ಆವಶ್ಯಕತೆಯ ಕುರಿತು ಈ ನಾಲ್ಕು ನೆಲೆಗಳಿಂದಲೂ ಶಕ್ತಿಯುತ ಪ್ರತಿಪಾದನೆಗೆ ಅವಕಾಶವಿದೆ. ಆದರೆ ಸಮಸ್ಯೆಗಳಿಗೆ ಇಂಗ್ಲಿಷ್ ಒಂದೇ ಪರಿಹಾರವೆಂದು ಭಾವಿಸಿದರೆ, ಅದರಿಂದಾಗುವ ಇನ್ನಿತರ ತೀವ್ರಪ್ರಮಾಣದ ತೊಂದರೆಗಳನ್ನು ಅಲಕ್ಷಿಸಿದಂತಾಗುತ್ತದೆ. ಒಂದೇ ಭಾಷೆಯನ್ನು ಎಲ್ಲೆಡೆ ಕಡ್ಡಾಯಗೊಳಿಸುವುದು ಸಾಧ್ಯವಿದ್ದಿದ್ದರೆ ಎಷ್ಟೋ ಭಾಷಾಸಮಸ್ಯೆಗಳು ಎಂದೋ ಪರಿಹಾರವಾಗುತ್ತಿದ್ದುವು. ಆದರೆ ಭಾಷಾವೈವಿಧ್ಯತೆಯ ಅಸ್ತಿತ್ವವನ್ನು ನಾಶಮಾಡುವ ಯಾವುದೇ ವ್ಯವಸ್ಥೆ ಮಾನವನ ವಿಕಾಸಕ್ಕೇ ಮಾರಕವಾಗಬಲ್ಲುದು ಎನ್ನುವುದು ವಾಸ್ತವ ಸಂಗತಿಯಾಗಿದೆ.

## ಟಿಪ್ಪಣಿಗಳು

1. 'ಸಿರಿಗನ್ನಡ' ವಸಂತ ಸಂಚಿಕೆ, 1993: 'ಕನ್ನಡ : ಆತಂಕಗಳು' ಲೇಖನ, ಪುಟ.15

2. 'ಕನ್ನಡ ಅಧ್ಯಯನ' – ಜನವರಿ 1994 : 'ಅನ್ಯಭಾಷಾ ಶಿಕ್ಷಣ ಮಾಧ್ಯಮ: ಭಾಷೆಯ ಹತ್ಯೆ – ಜನಾಂಗದ ಹತ್ಯೆ' ಲೇಖನದ ಕನ್ನಡಾನುವಾದ, ಪು.86

3. 'ಸಿರಿಗನ್ನಡ' ವಸಂತ ಸಂಚಿಕೆ, 1993 : 'ಕನ್ನಡ ಆತಂಕಗಳು' ಲೇಖನ, ಪು.15

4. 'ಕನ್ನಡ ಅಧ್ಯಯನ' – ಜನವರಿ 1994 : 'ಪ್ರಾದೇಶಿಕ ಭಾಷೆಗಳು ಅಥವಾ ಇಂಗ್ಲಿಷ್? ಉನ್ನತ ಮಾಧ್ಯಮವಾಗಿ' ಲೇಖನ, ಪು.142–43

5. 'ತೆರೆದ ಮನೆ', ಪು.147

6. 'ಷಷ್ಠಿನಮನ' – ಪು.109 ಮತ್ತು 117

7. 'ಕನ್ನಡ ಅಧ್ಯಯನ' – ಜನವರಿ 1994, ಪು.86

ಅಧ್ಯಾಯ –3 : ಚಾರಿತ್ರಿಕ ಹಿನ್ನೆಲೆ

ಕಳೆದ ಅಧ್ಯಾಯದಲ್ಲಿ ಪರಿಶೀಲಿಸಿದ ನಾಲ್ಕು ಪ್ರಮುಖವಾದ ಭಾಷಾಸಮಸ್ಯೆಗಳ ಬೆಳಕಿನಲ್ಲಿ ಚಾರಿತ್ರಿಕವಾಗಿ ಕನ್ನಡ – ಇಂಗ್ಲಿಷ್ ಸಂಬಂಧ ಜನರ ಮನೋಭೂಮಿಕೆಯಲ್ಲಿ ಹೇಗೆ ಬದಲಾಗುತ್ತ ಬೆಳೆದು ಬಂತು – ಎಂಬುದನ್ನು ಇಲ್ಲಿ ಗಮನಿಸಬಹುದು. ಕನ್ನಡಕ್ಕೆ ಇಂಗ್ಲಿಷ್ ಭಾಷೆಯ ಸಂಪರ್ಕ ಮತ್ತು ಪ್ರಭಾವವನ್ನು ಒಟ್ಟು ಭಾರತೀಯ ಸಂದರ್ಭದಿಂದ ಬೇರ್ಪಡಿಸಿ ನೋಡುವುದು ಸಾಧ್ಯವಿಲ್ಲ. ಇಂಗ್ಲಿಷ್ ಭಾಷೆ ಮತ್ತು ಭಾರತೀಯ ಭಾಷೆಗಳು ಮುಖಾಮುಖಿಯಾದಾಗ ಉಂಟಾದ ಏರುಪೇರುಗಳು ಕರ್ನಾಟಕದಲ್ಲೂ ಉಂಟಾದವು.

ಭಾರತದಲ್ಲಿ ಬ್ರಿಟಿಷರು ನೆಲೆಯೂರಿದ ಬಳಿಕ ಇಂಗ್ಲಿಷ್ ಭಾಷೆಯ ಬಗ್ಗೆ ಈ ದೇಶದ ಜನರ ಭಾವನೆ ಮೂರು ಬಾರಿ ಪರಿವರ್ತನೆ ಹೊಂದಿದುದನ್ನು ನಾವು ಗಮನಿಸಬಹುದು:

1) <u>ಇಂಗ್ಲಿಷ್ ಒಲವು</u> : 19 ನೇ ಶತಮಾನದ ಆರಂಭಕಾಲದಲ್ಲಿ ಇಂಗ್ಲಿಷ್ ಭಾಷೆ ಹಾಗೂ ಶಿಕ್ಷಣವೇ ಉತ್ತಮ, ಉಪಯುಕ್ತ ಎಂಬ ಭಾವನೆ ಬೆಳೆದು ಬಂತು.

2) <u>ದೇಶೀಯತೆ</u> : 19ನೇ ಶತಮಾನದ ಕೊನೆಯಲ್ಲಿ ಸ್ವಾತಂತ್ರ್ಯ ಹೋರಾಟದೊಂದಿಗೆ ದೇಶೀಯತೆಯೂ, ಇಂಗ್ಲಿಷ್ ವಿರೋಧೀ ಮನೋಭಾವವೂ ಉಂಟಾಯಿತು.

3) <u>ಮತ್ತೆ ಇಂಗ್ಲಿಷ್ ದಾಸ್ಯ</u> : ಸ್ವಾತಂತ್ರ್ಯಾನಂತರ ಇಂಗ್ಲಿಷ್‌ನ ಹಿಡಿತ ಬಲವಾಯಿತು.

ಈ ಮೂರನ್ನೂ ವಿವರವಾಗಿ ಪರಿಶೀಲಿಸುವ ಮೂಲಕ ಇಂಗ್ಲಿಷ್‌ನ ವಿಷಯದಲ್ಲಿ ಜನರ ಭಾವನೆಗಳು ಬದಲಾಗುವುದಕ್ಕೆ ಕರಣವೇನು ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಬಹುದು.

## 1. ಇಂಗ್ಲಿಷನತ್ತ ಒಲವು

1600 ರಲ್ಲಿ ಭಾರತಕ್ಕೆ ಬಂದ ಬ್ರಿಟಿಷರು ತಮ್ಮ ವ್ಯಾಪಾರ ವಸಾಹತುಗಳನ್ನು ನೆಲೆಗೊಳಿಸುತ್ತ, ಬಂದಂತೆ ಯುರೋಪಿಯನ್ನರಿಗೆ, ಆಂಗ್ಲೋ-ಇಂಡಿಯನ್ನರಿಗೆ ಹಾಗೂ ಕಂಪನಿಯ ಭಾರತೀಯ ನೌಕರಿಗಾಗಿ ಶಾಲೆ ತೆರೆದರು.[1] ಈ ಒಂದು ಅಂಶದಲ್ಲಿ ಕೆಲವು ಸೂಚನೆಗಳಿವೆ. ಒಂದು, ನೌಕರಶಾಹಿ ವ್ಯವಸ್ಥೆಯಲ್ಲಿ ಭಾರತೀಯರು ನೌಕರಿಗಾಗಿ ಸೇರಿಕೊಂಡರು ಹಾಗೂ ಇಂಗ್ಲಿಷ್ ಕಲಿತರು. ಎರಡು, ತಮ್ಮ ನೌಕರಿಗೆ ತಮ್ಮ ಭಾಷೆಯನ್ನು ಕಲಿಸುವ ಮೂಲಕ ಭಾಷೆಯ ದೃಷ್ಟಿಯಿಂದ ನೌಕರ-ಒಡೆಯ ಎಂಬ ಅಂತರ ಉಳಿಯುವುದು ಸಹಜ. (ಇಂಗ್ಲಿಷ್ ಭಾಷೆ, ಸಾಹಿತ್ಯ ಇತ್ಯಾದಿಗಳನ್ನೆಲ್ಲ ಚೆನ್ನಾಗಿ ಕಲಿತ ಇಂಗ್ಲಿಷರು ಒಂದೆಡೆ, ಅದನ್ನು ಇನ್ನೂ ಕಲಿಯುತ್ತಿರುವ ಭಾರತೀಯ ನೌಕರ ಇನ್ನೊಂದೆಡೆ. ಎಷ್ಟಿದ್ದರೂ ಈ ಅಂತರ, ಭೇದಭಾವ ಉಳಿದೇ ಉಳಿಯುತ್ತದೆ.) ಬ್ರಿಟಿಷರ ಕೈಯಲ್ಲಿ ಕೆಲವು ಪ್ರದೇಶಗಳ ಆಡಳಿತ ಬಂದಾಗ ಈ ನೌಕರರು ಉಳಿದ ಅನಕ್ಷರಸ್ಥ ಅಥವಾ ಇಂಗ್ಲಿಷ್ ಕಲಿಯದ ಭಾರತೀಯರಿಗಿಂತ ಪ್ರತ್ಯೇಕವಾಗಿ, ವಿಶೇಷತಃ ಆಳುವವರಿಗೆ ಹತ್ತಿರದವರಾಗಿದ್ದರಿಂದ ತಾವು ಮೇಲ್ಪಟ್ಟವರು ಎಂದೇ ಭಾವಿಸತೊಡಗಿದರು. ಇಂಗ್ಲಿಷ್ ಭಾಷೆ ಮತ್ತು ಆಡಳಿತ ಬೇರೆಯಾಗಿ ಭಾರತಕ್ಕೆ ಬರಲಿಲ್ಲ; ಭಾಷೆ ಆಡಳಿತವನ್ನು ಬಲಪಡಿಸುವ ಪ್ರಧಾನ ಅಸ್ತ್ರವಾಗಿಯೇ ಬಂದಿತು. ಇಂಗ್ಲಿಷ್ ಭಾಷೆ ಭಾರತೀಯರ ಮೇಲೆ ಉಂಟುಮಾಡುವ ಪರಿಣಾಮ ಬ್ರಿಟಿಷರಿಗೆ ಅನುಕೂಲವಾಗಿಯೇ ಇತ್ತು. ಇದಕ್ಕೆ ಕಾರಣ ಬಹುಶಃ ಹೀಗಿರಬಹುದು —

1) ವ್ಯಾಪಾರದಿಂದ ಆರ್ಥಿಕವಾಗಿ ಸುಭದ್ರವಾಗಿದ್ದ ಇಂಗ್ಲಿಷರ ಸ್ಥಾನಮಾನ ಬಡಭಾರತೀಯರಿಗಿಂತ ಉನ್ನತವಾಗಿದ್ದುದು. 2) ಅನ್ಯಭಾಷೆ, ಸಂಸ್ಕೃತಿ ಮೂಡಿಸುವ ಸಹಜ ಕುತೂಹಲದಿಂದ ಉಂಟಾದ ಪ್ರಭಾವ. 3) ಇಂಗ್ಲಿಷರ ಆಧುನಿಕತೆ. 4) ಹಡಗುಪಡೆ, ಅದರ ರಕ್ಷಣೆಗಾಗಿ ಪ್ರತ್ಯೇಕ ಸೈನಿಕ ಪಡೆ[2] — ಇವುಗಳಿಂದ ಬ್ರಿಟಿಷರ ವ್ಯಾಪಾರೀ ಸಿದ್ಧತೆ ಹಾಗೂ ಅವರ ಚುರುಕಾದ ಚಟುವಟಿಕೆಗಳು ದೇಶೀಯರಿಗೆ ಅಚ್ಚರಿ ಮೂಡಿಸಿದ್ದು.

ಇವೆಲ್ಲ ಕಾರಣಗಳಿಂದ ಭಾರತೀಯರ ಮೇಲೆ ಉಂಟಾದ ಬ್ರಿಟಿಷರ ಪ್ರಭಾವದೊಂದಿಗೆ,

ಅವರ ಭಾಷೆ ಕೂಡಾ ಪ್ರಭಾವ ಬೀರಿತು. ಆರ್ಥಿಕ ಸ್ಥಾನಮಾನಗಳೂ ಸಮಾಜದಲ್ಲಿ ಒಂದು ವರ್ಗ ಇನ್ನೊಂದು ವರ್ಗದ ಭಾಷೆಯನ್ನು ಕಲಿಯಲು ಕಾರಣವಾಗಿರುತ್ತದೆ. ಇಲ್ಲಿ ಬಹುಸಂಖ್ಯಾತ ಭಾರತೀಯರ ಭಾಷೆಯನ್ನು ಬ್ರಿಟಿಷರೇ ಕಲಿಯಬೇಕಿತ್ತು; ಆದರೆ ಅವರಿಗೆ ಇಲ್ಲಿ ದೊರಕಿದ ವಿಶೇಷ ಸ್ಥಾನದಿಂದಾಗಿ (ವ್ಯಾಪಾರ ಅಭಿವೃದ್ಧಿ, ಆಡಳಿತದಲ್ಲಿ ಪ್ರವೇಶ ಇತ್ಯಾದಿಗಳಿಂದ) ಅವರ ಭಾಷೆಯನ್ನೇ ಭಾರತೀಯರು ಕಲಿಯುವಂತಾಯಿತು. ಅವರ ಕೈಕೆಳಗಿದ್ದ ಭಾರತೀಯ ನೌಕರರು ಇಂಗ್ಲಿಷ್ ಕಲಿತದ್ದರಿಂದಲೇ ತಮ್ಮವರ ನಡುವೆ ದೊರಕದ ಸ್ಥಾನಮಾನವನ್ನು ಗಳಿಸಿಕೊಂಡರು. ಬ್ರಿಟಿಷರು ಇದರಿಂದ ಎರಡು ಲಾಭಗಳನ್ನು ಪಡೆದರು. ಒಂದು, ತಮ್ಮ ವಸಾಹತುಗಳ ವಿಸ್ತರಣೆ ಹಾಗೂ ಭಾರತೀಯರ ದುಡಿಮೆಯ ಉಪಯೋಗ. ಎರಡು, ಈ ದೇಶದಿಂದಲೇ ತಮಗೆ ಅನುಕೂಲರಾದ ವರ್ಗವೊಂದರ ರಚನೆ; ಅದರಿಂದ ತಾವು ಎದುರಿಸಬೇಕಾದ ಜನಾಂಗದ ಶಕ್ತಿಕ್ಷಯ.

1780 ರಿಂದ 1813ರ ವರೆಗೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಮುಸ್ಲಿಮರಿಗೆ ಮತ್ತು ಹಿಂದೂಗಳಿಗೆ ಮದ್ರಸಾ ಮತ್ತು ಸಂಸ್ಕೃತ ವಿದ್ಯಾಲಯಗಳನ್ನು ತೆರೆದದ್ದರ ಉದ್ದೇಶವೂ ತಮ್ಮ ಆಡಳಿತವನ್ನು ಬಲಪಡಿಸುವುದೇ ಆಗಿತ್ತು. ಭಾರತೀಯರಿಗೆ ಶಿಕ್ಷಣ ನೀಡಬೇಕೆಂದೇ ಅವುಗಳನ್ನು ಸ್ಥಾಪಿಸದೆ, ಮುಸ್ಲಿಮರನ್ನು 'ಲಾಭಕರ ಸರಕಾರಿ ಉದ್ಯೋಗಗಳಿಗಾಗಿ ಅರ್ಹರನ್ನಾಗಿ ಮಾಡುವುದು' ಮತ್ತು 'ಸರಕಾರವನ್ನು ದೇಶೀಯ ಹಿಂದುಗಳಿಗೆ ಪ್ರೀತಿಪಾತ್ರವನ್ನಾಗಿ ಮಾಡುವ' ಮತ್ತು 'ಯುರೋಪಿಯನ್ ನ್ಯಾಯಾಧೀಶರಿಗೆ ಸಹಾಯ ಮಾಡಲು ಭವಿಷ್ಯದಲ್ಲಿ ವಿದ್ವಾಂಸರನ್ನೂ (ಹಿಂದೂ ಶಾಸನದ) ಭಾಷ್ಯಕಾರರನ್ನೂ ಸಿದ್ಧಗೊಳಿಸುವುದ'[3] ಕ್ಕಾಗಿಯೇ ಅವುಗಳನ್ನು ಸ್ಥಾಪಿಸಿದರು. ಈ ಎರಡೂ ಉದ್ದೇಶಗಳ ಹಿಂದೆ ತಮ್ಮ ಆಡಳಿತದಲ್ಲಿ ಭಾರತೀಯರನ್ನು ಉಪಯೋಗಿಸಿಕೊಳ್ಳುವ, ಮತ್ತು ತಮ್ಮ ಆಡಳಿತ ಸಮರ್ಥವೆಂದು ಜನರಿಗೆ ಕಾಣಿಸುವ ಮೂಲಕ ಅವರಿಂದ ಉಂಟಾಗಬಹುದಾದ ದಂಗೆಯನ್ನು ಅಡಗಿಸುವ ಪ್ರಯತ್ನವಿದ್ದಂತೆ ತೋರುತ್ತದೆ.

ಬ್ರಿಟಿಷ್ ಶಿಕ್ಷಣ ನೀತಿಗೆ ಹೊಸ ತಿರುವು ಉಂಟಾದದ್ದು 1813 ರಲ್ಲಿ ಹೊರಡಿಸಿದ ಚಾರ್ಟರ್ ಕಾಯಿದೆಯ ಮೂಲಕ. ''ಸಾಹಿತ್ಯದ ಪುನರುಜ್ಜೀವನ ಮತ್ತು ಅಭಿವೃದ್ಧಿಗಾಗಿ ಮತ್ತು ಭಾರತದಲ್ಲಿಯ ದೇಶೀಯ ವಿದ್ವಾಂಸರಿಗೆ ಪ್ರೋತ್ಸಾಹ ನೀಡುವದಕ್ಕಾಗಿ

ಮತ್ತು ಭಾರತದಲ್ಲಿರುವ ಬ್ರಿಟಿಷ್ ನಿವಾಸಿಗಳಲ್ಲಿ ವಾಸಿಸುವವರಲ್ಲಿ ವಿಜ್ಞಾನಗಳ ಜ್ಞಾನವನ್ನು ಹರಡುವದಕ್ಕಾಗಿ ಮತ್ತು ಅಭಿವೃದ್ಧಿ ಪಡಿಸುವದಕ್ಕಾಗಿ, ಕಂಪನಿಯು 'ಪ್ರತಿವರುಷ ಒಂದು ಲಕ್ಷ ರೂಪಾಯಿಗಳಿಗಿಂತಲೂ ಕಡಿಮೆ ಇಲ್ಲದಷ್ಟು ಮೊತ್ತವನ್ನು' ಬೇರೆಯಾಗಿ ತೆಗೆದಿಡುವುದು ಅವಶ್ಯವಾಗಿದೆಯೆಂದು 1813 ರ ಚಾರ್ಟರ ಕಾಯ್ದೆಯು ವಿಧಿಸಿತು''[4] ಜ್ಞಾನಪ್ರಸಾರಕ್ಕಾಗಿ ಮತ್ತು ನೈತಿಕ ಬೆಳವಣಿಗೆಗಾಗಿ ಮಿಶನರಿಗಳ ಪ್ರಚಾರ ಕಾರ್ಯಕ್ಕೆ ಇದರಿಂದ ತುಂಬ ಅನುಕೂಲತೆ ಉಂಟಾಯಿತು. ಮಿಶನರಿಗಳು ಪ್ರಾದೇಶಿಕ ಭಾಷೆಗಳಲ್ಲಿ ಬಹಳಷ್ಟು ಶಾಲೆಗಳನ್ನು ತೆರೆದವು. ಅದರೊಂದಿಗೆ ಇವುಗಳು ''ಮಿಶನ್ ಹೈಸ್ಕೂಲುಗಳು'' ಮತ್ತು ''ಕಾನ್ವೆಂಟ್'' ಗಳನ್ನೂ ತೆರೆದವು. ಇವು ಇಂಗ್ಲಿಷ್ ಮಾಧ್ಯಮ ಶಾಲೆಗಳಾಗಿದ್ದವು. ಪ್ರಾದೇಶಿಕ ಭಾಷಾ ಶಾಲೆಗಳು ಮತ್ತು ಇಂಗ್ಲಿಷ್ ಮಾಧ್ಯಮ ಶಾಲೆಗಳು — ಎಂದು ಎರಡು ರೀತಿಯಲ್ಲಿ ಶೈಕ್ಷಣಿಕ ಕಾರ್ಯ ನಡೆಯುತ್ತಿದ್ದ ಈ ಕಾಲಘಟ್ಟದಲ್ಲಿ ಇಂಗ್ಲಿಷ್ ಮತ್ತು ದೇಶಭಾಷೆಗಳ ಬಗೆಗೆ ಜನರ ಮನೋಭಾವದಲ್ಲಿ ಉಂಟಾದ ಬದಲಾವಣೆಯನ್ನು ಕಾಣಬಹುದು. ಭಾರತದಲ್ಲಿನ ಮೇಲ್ವರ್ಗದವರು ಸರಕಾರೀ ಉದ್ಯೋಗಕ್ಕಾಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಬಹಳಷ್ಟು ಆಶ್ರಯ ನೀಡಿದರು.[5] ಶ್ರೀನಿವಾಸ ಹಾವನೂರರು ಗುರುತಿಸುತ್ತಾರೆ:

''ಇತ್ತ ಪಾಶ್ಚಾತ್ಯ ಶಿಕ್ಷಣ ವಿಚಾರದಲ್ಲಿ ಹಿಂದೂ ಜನತೆಯ ಆರಂಭದ ಪ್ರತಿಕ್ರಿಯೆ ನೋಡುವ ಹಾಗಿದೆ. ಶಾಲೆಗಳನ್ನು ತೆರೆದವರು ವಿದೇಶೀಯರು. ಮೇಲಾಗಿ ಮತಾಂತರ ಗೊಳಿಸಲು ಟೊಂಕ ಕಟ್ಟಿದವರು. ಆದರೂ ಇಂಗ್ಲಿಷ್ ಶಿಕ್ಷಣದ ವ್ಯಾವಹಾರಿಕ ಪ್ರಯೋಜನದ ದೃಷ್ಟಿಯಿಂದ, ಕ್ರೈಸ್ತಮತೀಯವಾದ ಪಾಠಗಳ ಕಹಿಯಂಶಗಳನ್ನು ತಾಳಿಕೊಂಡು, ತಮ್ಮ ಮಕ್ಕಳನ್ನು ಕಳಿಸತೊಡಗಿದರು''[6]

ಸರಕಾರದ ಶೈಕ್ಷಣಿಕ ಸುಧಾರಣೆ ಹಾಗೂ ಮಿಶನರಿಗಳ ಚಟುವಟಿಕೆಗಳು ದೇಶಭಾಷೆ ಹಾಗೂ ಇಂಗ್ಲಿಷನಲ್ಲಿ ನಡೆದಿದ್ದರೂ ಭಾರತೀಯರು ಹೆಚ್ಚಾಗಿ ಇಂಗ್ಲಿಷ್ ಭಾಷೆಯನ್ನು ಕಲಿಯಲು ಬಯಸಿದರು ಎಂಬುದು ಇದರಿಂದ ತಿಳಿದು ಬರುತ್ತದೆ.

ಭಾಷಾಸಮಸ್ಯೆಗಳಿಗೆ ದಾರಿ ಮಾಡಿಕೊಟ್ಟ ಮೂರು ಮುಖ್ಯ ಸಂಗತಿಗಳನ್ನು ಇಲ್ಲಿ

ಗುರುತಿಸಬಹುದು:

1) ಮೇಲ್ವರ್ಗದವರು ನೌಕರಿಗಾಗಿ ಇಂಗ್ಲಿಷ್ ಕಲಿತರು; ಆ ಮೂಲಕ ಆಡಳಿತವನ್ನು ಅವಲಂಬಿಸಿದ ಶಿಕ್ಷಣಕ್ಕೆ ಚಾಲನೆಯುಂಟಾಗಿ, ಅದೇ ಆಡಳಿತ ಬಲವಾಗಲು ಕಾರಣವಾಯಿತು.

2) ಆಧುನಿಕ ಜ್ಞಾನ, ವಿಚಾರಗಳ ಪ್ರಭಾವ ದೇಶೀಯತೆ ಮತ್ತು ಮಾತೃಭಾಷಾ ಪ್ರೇಮಗಳನ್ನು ಕೊಚ್ಚಿಕೊಂಡು ಹೋಯಿತು; ಅನ್ಯಭಾಷಾಭಿಮಾನ ಹೆಚ್ಚಿತು.

3) ಇಂಗ್ಲಿಷ್ ಶಿಕ್ಷಣ ಪಡೆದವರದೊಂದು ವರ್ಗ, (ಮುಖ್ಯವಾಗಿ ಮೇಲ್ವರ್ಗ — ಶಿಕ್ಷಣದಿಂದ ದೊರಕುವ ಲಾಭದ ಬಗ್ಗೆ ಅರಿವಿದ್ದ ಮತ್ತು ಶಾಲೆಗೆ ಮಕ್ಕಳನ್ನು ಕಳುಹಿಸಲು ಅನುಕೂಲತೆಗಳಿದ್ದ ವರ್ಗ) ಪಡೆಯದವರದೊಂದು ವರ್ಗ.

ಭಾರತೀಯ ಸಮಾಜದಲ್ಲಿ ಈಗಾಗಲೇ ಮೇಲ್ವರ್ಗಕ್ಕೆ ಸೇರಿದವರಾದ ಇಂಗ್ಲಿಷ್ ಶಿಕ್ಷಿತರು ತಮಗೆ ದೊರೆತ ನೌಕರಿ, ಜ್ಞಾನ ಹಾಗೂ ಸ್ಥಾನಮಾನಗಳಿಂದ ಹೊಸ ತಲೆಮಾರನ್ನು ಇಂಗ್ಲಿಷ್ ಒಲವುಳ್ಳ ತಲೆಮಾರಾಗಿ ಬೆಳೆಸಲು ಕಾರಣರಾದರು. ಸಮಾಜದ ಎಲ್ಲ ಜನರು ಪ್ರಭಾವಶಾಲಿ ವ್ಯಕ್ತಿಗಳನ್ನು ಅನುಸರಿಸುವ ಮೂಲಕ ಒಟ್ಟು ಜನಾಂಗದಲ್ಲುಂಟಾಗುವ ಬದಲಾವಣೆ ತಲೆಮಾರುಗಳ ಮೂಲಕ ಹರಿದುಬಂದದ್ದೇ ಇಂಗ್ಲಿಷ್ ಹಿಡಿತದ ನಿರಂತರತೆಗೆ ಕಾರಣವಾಯಿತು. ಹೀಗಾಗಿ ಇಂಗ್ಲಿಷ್ ವ್ಯಾಮೋಹದ ಮೂಲಕಾರಣವನ್ನು ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಭಾರತೀಯರ ಮೇಲೆ ಉಂಟಾದ ಮೊತ್ತಮೊದಲ ಪ್ರಭಾವದಲ್ಲೇ ಗುರುತಿಸಬಹುದು.

ಶಿಕ್ಷಣದ ಜವಾಬ್ದಾರಿಯನ್ನು ಬ್ರಿಟಿಷ್ ಆಡಳಿತವೇ ಪೂರ್ಣವಾಗಿ ಹೊತ್ತಾಗ, ಸಂಸ್ಕೃತ, ಪರ್ಶಿಯನ್, ಅರೇಬಿಕ್ — ಈ ಕ್ಲಾಸಿಕಲ್ ಭಾಷೆಗಳನ್ನು ಅಭ್ಯಸಿಸಿದ ಆಂಗ್ಲ ವಿದ್ವಾಂಸರು (ಓರಿಯೆಂಟಲಿಸ್ಟರು) ಭಾರತೀಯರಿಗೆ ಪೌರ್ವಾತ್ಯ ಶಿಕ್ಷಣ ವ್ಯವಸ್ಥೆಯನ್ನು ಅನುಸರಿಸಿ ವಿದ್ಯಾಭ್ಯಾಸ ನೀಡಬೇಕೆಂದೂ, ಆಂಗ್ಲಿಸಿಸ್ಟರು ಪಾಶ್ಚಾತ್ಯ ಶಿಕ್ಷಣ ವ್ಯವಸ್ಥೆಯನ್ನು ಅನುಸರಿಸಿ ವಿದ್ಯಾಭ್ಯಾಸ ನೀಡಬೇಕೆಂದೂ, ವಾದ — ವಿವಾದ ನಡೆಸಿದರು.

ಸಂಸ್ಕೃತ, ಇಂಗ್ಲಿಷ್‌ಗಳನ್ನು ಚೆನ್ನಾಗಿ ಅಭ್ಯಸಿಸಿದ್ದ ರಾಜಾರಾಮ್ ಮೋಹನರಾಯ್ ಮೊದಲಾದ ಭಾರತೀಯ ಸುಧಾರಕರು ಇಂಗ್ಲಿಷ್ ಶಿಕ್ಷಣ ನೀಡಬೇಕೆಂದು ವಾದಿಸಿದರು. ಇಲ್ಲಿ

ಆಂಗ್ಲಿಸಿಸ್ಟರ ಮತ್ತು ಭಾರತೀಯ ಸುಧಾರಕರ ವಾದಗಳ ಹಿಂದಿದ್ದ ತರ್ಕ ಬೇರೆ ಬೇರೆಯಾಗಿತ್ತೆಂಬುದು ಕುತೂಹಲಕರವಾಗಿದೆ. ಬ್ರಿಟಿಷರ ಆಡಳಿತ ಬಲಗೊಳ್ಳಲು ಇಂಗ್ಲಿಷ್ ವಿದ್ಯಾಭ್ಯಾಸ ಅನುಕೂಲವೆಂದು ಆಂಗ್ಲಿಸಿಸ್ಟರ ಭಾವನೆಯಾಗಿದ್ದರೆ, ಇಂಗ್ಲಿಷ್ ಶಿಕ್ಷಣ ಭಾರತವನ್ನು ಕವಿದ ಅಂಧಕಾರವನ್ನು ನೀಗಿಸಲು ಅನಿವಾರ್ಯ ಎಂದು ರಾಜಾರಾಮ್ ಮೋಹನರಾಯ್ ಮೊದಲಾದವರ ಭಾವನೆಯಾಗಿತ್ತು. ಹೊಸ ತಿಳುವಳಿಕೆ ಹಾಗೂ ಆಡಳಿತವನ್ನು ಹಿಡಿತದಲ್ಲಿಡುವ ಸಾಧನ — ಈ ಎರಡು ಅವಶ್ಯಕತೆಗಳ ಒತ್ತಡ ಇಲ್ಲಿ ಒಗ್ಗೂಡಿವೆ. ಒಂದರಿಂದ ಜನರಿಗೆ ಲಾಭ, ಇನ್ನೊಂದರಿಂದ ಜೀವನದ ಮೇಲೆ ನಿಯಂತ್ರಣ; ಆದರೆ ಇವೆರಡೂ ಒಂದೇ ಕಾರ್ಯದ ಮೂಲಕ ಸಾಧಿತವಾಗಬೇಕಾಗಿ ಬಂದಿತು. 1935ರಲ್ಲಿ ಮೆಕಾಲೆ ತನ್ನ ವರದಿಯಲ್ಲಿ ಇಂಗ್ಲಿಷ್ ಶಿಕ್ಷಣ ನೀಡಬೇಕಾದ ಅಗತ್ಯವನ್ನೂ, ಅದರಿಂದ ಇಂಗ್ಲಿಷ್ ಶಿಕ್ಷಣ ಪಡೆದು ಪಳಗಿದ ಶಿಕ್ಷಕರು ದೇಶದ ಜನರಿಗೆ ಅವರ ಭಾಷೆಯಲ್ಲಿ ಐರೋಪ್ಯ ಜ್ಞಾನವನ್ನು ಹರಡಬೇಕಾದ ಅವಶ್ಯಕತೆಯನ್ನೂ ಪ್ರತಿಪಾದಿಸಿದನು. ಅವನು ಸಂಸ್ಕೃತ, ಪರ್ಷಿಯನ್ ಮೊದಲಾದ ಭಾಷೆಗಳನ್ನೂ, ಪ್ರಾದೇಶಿಕ ಭಾಷೆಗಳನ್ನೂ ಕ್ಷುಲ್ಲಕವಾಗಿ ಕಂಡರೂ, ಅವನ ಪ್ರತಿಪಾದನೆ ವಸಾಹತುಶಾಹಿ ಮನೋಭಾವವನ್ನು ಹಾಗೂ ಸುಧಾರಕ ಮನೋಭಾವವನ್ನು ಸಮರ್ಥವಾಗಿ ಬೆಂಬಲಿಸಿತೆಂಬುದು ನಿಜ. ಪರಿಣಾಮವಾಗಿ 1935 ರಲ್ಲಿ ಆಗಿನ ಗರ್ವನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕನು ಶಿಕ್ಷಣಕ್ಕಾಗಿ ಮೀಸಲಿಟ್ಟ ಹಣವನ್ನು ಇಂಗ್ಲಿಷ್ ಶಿಕ್ಷಣಕ್ಕಾಗಿ ಬಳಸಲಾಗುವುದೆಂದು ಒಂದು ಘೋಷಣೆಯನ್ನು ಹೊರಡಿಸಿದನು. ಭಾರತದಲ್ಲಿ ಇಂಗ್ಲಿಷ್ ಭಾಷೆ ಹರಡಲು ಈ ನಿರ್ಣಯ ಪ್ರಧಾನ ಕಾರಣವಾಯಿತು. 1944 ರಲ್ಲಿ ಇಂಗ್ಲಿಷ್ ಕಲಿತವರಿಗೆ ಸರಕಾರಿ ಉದ್ಯೋಗಗಳಲ್ಲಿ ಆದ್ಯತೆ ನೀಡಲೂ ನಿರ್ಣಯಿಸಲಾಯಿತು. ಇಂಗ್ಲಿಷ್ ಶಿಕ್ಷಣ ಇನ್ನಷ್ಟು ವ್ಯಾಪಕವಾಗಲು ಈ ನಿರ್ಣಯವೂ ಕಾರಣವಾಯಿತು.

1813 ರಿಂದ 1854 ರ ನಡುವಿನ ಅವಧಿಯಲ್ಲಿ ಮಿಶನರಿಗಳ ಚಟುವಟಿಕೆ, ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳ ಸ್ಥಾಪನೆ — ಇವುಗಳಿಂದ ಇಂಗ್ಲಿಷ್ ಶಿಕ್ಷಣ ಹೆಚ್ಚು ವ್ಯಾಪಕವಾಯಿತು.[7]

1854 ರಲ್ಲಿ 'ವುಡ್ಸ್ ಡಿಸ್ಪ್ಯಾಚ್' ಎಂಬ ಶೈಕ್ಷಣಿಕ ವರದಿಯ ಮೂಲಕ ಇಂಗ್ಲಿಷಿನೊಂದಿಗೆ ಮಾತೃಭಾಷೆಯನ್ನು ವ್ಯಾಪಕವಾಗಿ ಕಲಿಸಲು ಸರಕಾರ ನಿರ್ಧರಿಸಿತು. ಆದರೆ

ಇಲ್ಲಿ 'ಇಂಗ್ಲಿಷ್ ಅರ್ಥವಾಗಬಲ್ಲವರಿಗೆ ಇಂಗ್ಲಿಷ್ ಶಿಕ್ಷಣ; ಅರ್ಥವಾಗದವರಿಗೆ — ಅದು ದೊಡ್ಡ ಜನಸಂಖ್ಯೆ — ದೇಶಭಾಷಾ ಶಿಕ್ಷಣ ನೀಡಬೇಕು' ಎಂದಿದೆ.[8] ಇಲ್ಲಿ ಇಂಗ್ಲಿಷ್ ಅರ್ಥವಾಗುವವರು, ಆಗದವರು — ಎನ್ನಲು ಯಾವ ಮಾನದಂಡವಿದೆ? ಮೇಲ್ವರ್ಗದವರು 'ಅರ್ಥವಾಗುವವರು' ಎಂದಾದರೆ, ಅವರಿಗೆ ಇಂಗ್ಲಿಷ್ ಬಗ್ಗೆ ಅತೀವ ಆಸಕ್ತಿಯಿತ್ತು ಎಂದೆನ್ನಬಹುದು. ಅಂದರೆ, 'ಅರ್ಥವಾಗದ' ದೊಡ್ಡ ಜನಸಂಖ್ಯೆಯಿಂದ 'ಅರ್ಥವಾಗುವ' ಕೆಲವರು ಆ ಕಾಲಕ್ಕೆ ಪ್ರತ್ಯೇಕಗೊಂಡಿದ್ದರು, ಅವರನ್ನು ಬ್ರಿಟಿಷರು ತಮ್ಮ ವಸಾಹತುಶಾಹಿ ಹಿಡಿತದಲ್ಲಿರಿಸಿಕೊಂಡಿದ್ದರು ಎಂದು ಅರ್ಥವಾಗುತ್ತದೆ. ಅದಲ್ಲದೆ, ವಿದ್ಯಾರ್ಥಿಗಳಿಗೆ ಬೇಡವಿದ್ದರೆ ಮಾತೃಭಾಷೆಯನ್ನು ಬಿಡಲಾಗುತ್ತಿತ್ತು.[9] ಮಾತೃಭಾಷಾ ಶಿಕ್ಷಣ ಅಷ್ಟಾಗಿ ಯಶಸ್ವಿಯಾಗಲಿಲ್ಲ ಎಂಬುದು, ಸರಕಾರಕ್ಕೆ ಅದನ್ನು ಕಲಿಸುವಲ್ಲಿ ನಿಜವಾದ ಆಸಕ್ತಿಯಿರಲಿಲ್ಲ ಎಂಬುದನ್ನು ಸೂಚಿಸುತ್ತದೆ.

1872ರ ಸ್ಯಾಡ್ಲರ್ ಕಮಿಶನ್, 1902ರ ಎಜುಕೇಶನ್ ಕಮಿಶನ್‌ಗಳು ಪ್ರಾದೇಶಿಕ ಶಿಕ್ಷಣದ ದುರ್ಬಲ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡವು. ಪ್ರಾಥಮಿಕ, ಮಾಧ್ಯಮಿಕ ತರಗತಿಗಳಲ್ಲೂ ಪ್ರಾದೇಶಿಕ ಭಾಷೆ, ಮತ್ತು ಎಲ್ಲಾ ಕ್ಲಾಸುಗಳಲ್ಲೂ ಇಂಗ್ಲಿಷನ್ನು ಮುಂದುವರೆಸಲು ಶಿಫಾರಸು ಮಾಡಿದವು. ಹೈಸ್ಕೂಲಿನಲ್ಲಿ ಇಂಗ್ಲಿಷ್ ಶಿಕ್ಷಣ ವಿಶ್ವವಿದ್ಯಾಲಯ ಶಿಕ್ಷಣಕ್ಕೆ ಸಿದ್ಧತೆಯಾಗಿತ್ತು. "ಆದ್ದರಿಂದ ಇಂಗ್ಲಿಷ್ ಅಭಿವೃದ್ಧಿಯಾಯಿತು; ಅಧ್ಯಾಪಕರು, ಸಲಕರಣೆಗಳಿಲ್ಲದೆ ಪ್ರಾದೇಶಿಕ ಭಾಷೆಗಳು ಸೊರಗಿದವು".[10]

ಆದರೆ 1913 ರಲ್ಲಿ ಸರಕಾರ ಪ್ರಾದೇಶಿಕ ಭಾಷೆಯಲ್ಲಿ ಪ್ರಾಥಮಿಕ ಹಂತದಿಂದ ಪ್ರೌಢಶಾಲೆಯವರೆಗೆ ಕಲಿಸುವ ಮಹತ್ವದ ನಿರ್ಣಯವನ್ನು ತೆಗೆದುಕೊಂಡಿತು. ಕಲ್ಕತ್ತಾ ವಿಶ್ವವಿದ್ಯಾಲಯ ಆಯೋಗ ಹಾಗೂ ಪಂಜಾಬ್ ವಿಶ್ವವಿದ್ಯಾಲಯ ವಿಚಾರಣಾ ಸಮಿತಿಯ ಅಭಿಪ್ರಾಯಗಳು ಕೂಡ ಎಲ್ಲ ಹಂತಗಳಲ್ಲಿ ಶಿಕ್ಷಣ ಮಾಧ್ಯಮ ಪ್ರಾದೇಶಿಕ ಭಾಷೆಯಾಗಿರಬೇಕು — ಎಂದಾಗಿದ್ದವು. "1920 ರ ನಂತರ, ಇಂಗ್ಲಿಷ್ ಮಾಧ್ಯಮ ಕೇವಲ ಕಾಲೇಜು ಮತ್ತು ವಿಶ್ವವಿದ್ಯಾಲಯಗಳಿಗೆ ಸೀಮಿತವಾಯಿತು".[11]

ಹೀಗೆ ಭಾರತವನ್ನು ವ್ಯಾಪಿಸಿದ ಇಂಗ್ಲಿಷನ್ನು ಒಪ್ಪಿಕೊಳ್ಳಲು ಭಾರತೀಯರ

ದುರ್ಬಲ ಸ್ವಂತಿಕೆ — ಅಭಿಮಾನಗಳು ಕಾರಣವಲ್ಲ. ಅವುಗಳ ಭದ್ರತೆಗೆ ಅತ್ಯವಶ್ಯಕವಾದ ಆರ್ಥಿಕ ಸುಭದ್ರತೆ, ಅತ್ಯಾಧುನಿಕ ಜ್ಞಾನ — ವಿಜ್ಞಾನ ನಮ್ಮಲ್ಲಿರಲಿಲ್ಲ. ಬ್ರಿಟಿಷರು ಭಾರತದಲ್ಲಿ ಆರ್ಥಿಕ ಸಾಮರ್ಥ್ಯ ಪಡೆದುಕೊಂಡದ್ದು ಈ ದೇಶದ ರಾಜಕೀಯದಲ್ಲಿ ಕೈ ಹಾಕಲು ಅನುಕೂಲವಾಯಿತು. ಆದರೆ ಅವರ ನೆರೆ ವ್ಯಾಪಾರದಿಂದ ಆಡಳಿತಕ್ಕೆ ವರ್ಗಾವಣೆ ಹೊಂದುವುದಕ್ಕೆ ಸಹಾಯಕವಾದ ಪ್ರಬಲ ಮಾಧ್ಯಮ — ಇಂಗ್ಲಿಷ್ ಭಾಷೆ. ಭಾಷೆಯೊಂದಿಗೆ ಸಂಸ್ಕೃತಿಯ ಪ್ರಭಾವವನ್ನು ಬೀರಿ ಭಾರತೀಯರ ಬೆಂಬಲ ಪಡೆದ ಅವರು ಆಂಗ್ಲಭಾಷೆ ಹಾಗೂ ಸಾಹಿತ್ಯ ಸಮೃದ್ಧಿಯನ್ನು (ಕೇವಲ ಸಾಹಿತ್ಯ ಎಂಬರ್ಥ ದಲ್ಲಲ್ಲ; ಪಾಶ್ಚಾತ್ಯ ವಿಜ್ಞಾನ, ತಂತ್ರಜ್ಞಾನಗಳಿಗೆ ಸಂಬಂಧಪಟ್ಟ ಸಾಹಿತ್ಯವನ್ನೂ ಒಳಗೊಂಡ ಸಾಹಿತ್ಯ ಎಂಬರ್ಥದಲ್ಲಿ) ಭಾರತೀಯರಿಗೆ ಕಲಿಸುವ ಮೂಲಕ ತಮ್ಮ ವಸಾಹತುಶಾಹಿ ಪ್ರಭುತ್ವವನ್ನು ಬಲಪಡಿಸಿಕೊಂಡರು. ಬ್ರಿಟಿಷ್ ಧೋರಣೆ ಹಾಗೂ ಅದರ ಪರಿಣಾಮಗಳನ್ನು ಹೀಗೆ ಕಾಣಬಹುದು:

ಆರ್ಥಿಕ ಸಾಮರ್ಥ್ಯ → ಭಾಷೆ — ಸಂಸ್ಕೃತಿಯ ಪ್ರಭಾವ → ಆಡಳಿತ ಸೂತ್ರ
ಆಡಳಿತ → ಭಾಷೆ, ಶಿಕ್ಷಣಗಳಲ್ಲಿ ಹಿಡಿತ → ನಿರಂತರ ಶೋಷಣೆ, ದಾಸ್ಯ

ಭಾರತದ ಮೇಲೆ ಇದು ಬೀರಿದ ಪರಿಣಾಮ ತಾತ್ಕಾಲಿಕವಾದುದಾಗಿರಲಿಲ್ಲ; ಚಾರಿತ್ರಿಕ ಘಟನಾವಳಿಗಳನ್ನು ಹಾದು ಬರುವಷ್ಟು ದೂರಗಾಮಿಯಾಗಿತ್ತು. ಇಂಗ್ಲಿಷ್ ಶಿಕ್ಷಣ, ಪ್ರಭಾವ ಮತ್ತು ಆಡಳಿತದಿಂದ ಭಾರತೀಯ ಜನಾಂಗಗಳು ಸಾಯಲಿಲ್ಲ; ಆದರೆ ಅವುಗಳ ಸೃಜನಶೀಲತೆ, ಸಾಂಸ್ಕೃತಿಕ ಶಕ್ತಿ ಇವುಗಳ ವಿಕಾಸ ಕುಂಠಿತವಾಯಿತು. ಹೊಸ ವಿಚಾರ ಗಳು ಮತ್ತು ಜ್ಞಾನಗಳು ಇಲ್ಲಿಗೆ ಬಂದವು; ಆದರೆ ಅವು ನಮ್ಮವುಗಳಾಗಿ ಬರಲಿಲ್ಲ — ಅವುಗಳಿಗೆ ನಮ್ಮನ್ನು ಅಧೀನರಾಗಿಸಿಕೊಂಡೇ ಬಂದವು.

ಬ್ರಿಟಿಷರಿಗೆ ಭಾರತದಲ್ಲಿ ಭಾಷೆಯ ಸಂಪರ್ಕ ಸಮಸ್ಯೆ ಉಂಟಾಗಿರಬಹುದಾದರೂ, ಇಂಗ್ಲಿಷ್ ಶಿಕ್ಷಣದಿಂದ ಅದು ಅಷ್ಟು ಗಮನಾರ್ಹವಾಗಲಿಲ್ಲ. ಒಂದುವೇಳೆ ಅವರು ಇಂಗ್ಲಿಷ್ ಕಲಿಸದೆ ಹೋಗುತ್ತಿದ್ದರೆ ಭಾರತವನ್ನು ಒಟ್ಟಾಗಿ ಆಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಇದನ್ನೇ 'ಬ್ರಿಟಿಷರು ಭಾರತವನ್ನು ಒಂದುಗೂಡಿಸಿದರು' ಎಂದು ಕೆಲವರು ವಾದಿಸುತ್ತಾರೆ. ಆದರೆ ಅವರು ಭಾರತವನ್ನು ಮೇಲ್ನೋಟಕ್ಕೆ ಒಂದುಗೂಡಿಸಿದರೇನೋ ನಿಜ; ಆಂತರಿಕ

ವಾಗಿ ಛಿದ್ರ ಛಿದ್ರಗೊಳಿಸಿದರು – ಭಾಷೆಯ ದೃಷ್ಟಿಯಿಂದ, ಸಂಸ್ಕೃತಿಯ ದೃಷ್ಟಿಯಿಂದ ಹಾಗೂ ಭಾರತದ ಸಮಗ್ರ ಬೆಳವಣಿಗೆಯ ದೃಷ್ಟಿಯಿಂದ. ಅವರು ಇಂಗ್ಲಿಷ್ ಮೂಲಕ ನೀಡಿದ ಕೊಡುಗೆಯೊಂದೇ, ಅದು ಪಾಶ್ಚಾತ್ಯ ಜಗತ್ತನ್ನು ನಮ್ಮ ಮುಂದೆ ತೆರೆದಿಟ್ಟುದು.

ಕರ್ನಾಟಕದಲ್ಲಿ ಇಂಗ್ಲಿಷ್ ಪ್ರಭಾವ ಒಟ್ಟು ಭಾರತೀಯ ಹಿನ್ನೆಲೆಯಲ್ಲಿ ಉಂಟಾಗಿದ್ದರೂ, ಇಲ್ಲಿನ ಆಡಳಿತ ವಿವಿಧ ಸಂಸ್ಥಾನಗಳಲ್ಲಿ ಹಂಚಿ ಹೋಗಿದ್ದರಿಂದ ಹಾಗೂ ಬ್ರಿಟಿಷ್ ಆಡಳಿತ ನೇರವಾಗಿ ಎಲ್ಲೆಡೆ ಇಲ್ಲದ್ದರಿಂದ ಇಲ್ಲಿನ ಶೈಕ್ಷಣಿಕ ಚಟುವಟಿಕೆಗಳು ಏಕಪ್ರಕಾರವಾಗಿರಲಿಲ್ಲ. ಆದ್ದರಿಂದ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಉಂಟಾದ ಇಂಗ್ಲಿಷ್ ಪ್ರಭಾವದಲ್ಲಿಯೂ ಹೆಚ್ಚುಕಡಿಮೆಯಿದೆ. ಉದಾ: ಮೈಸೂರು ಪ್ರಾಂತದ ಮೇಲೆ ಧಾರವಾಡಕ್ಕಿಂತ ಹೆಚ್ಚು ಪ್ರಭಾವವುಂಟಾಗಿದೆ.

ಟಿಪ್ಪುವನ್ನು 1793 ರಲ್ಲಿ ಸೋಲಿಸಿದ ಬ್ರಿಟಿಷರು ಶ್ರೀರಂಗಪಟ್ಟಣ ಒಪ್ಪಂದದ ಪ್ರಕಾರ ತುಂಗಭದ್ರೆಯ ಉತ್ತರದ ಪ್ರದೇಶಗಳನ್ನು ಮರಾಠರಿಗೂ, ಹೈದರಾಬಾದಿನ ನಿಜಾಮರಿಗೂ ಹಂಚಿದರು. ಮರಾಠರ ಆಡಳಿತ 1818 ರಲ್ಲಿ ಕೊನೆಗೊಂಡಾಗ ಅವರ ಕೈಕೆಳಗಿನ ಪ್ರದೇಶಗಳೆಲ್ಲ ಬ್ರಿಟಿಷರಿಗೆ ಸೇರಿತು. ಮೈಸೂರನ್ನು ಒಂದು ಪ್ರತ್ಯೇಕ ಕೇಂದ್ರಸ್ಥಳವಾಗಿಟ್ಟುಕೊಂಡು, ಬ್ರಿಟಿಷ್ ಪ್ರತಿನಿಧಿಯೊಬ್ಬನ ಮೇಲ್ವಿಚಾರಣೆಯಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ 1811 ರಲ್ಲಿ ಆಡಳಿತವನ್ನು ಒಪ್ಪಿಸಿದರು. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಆಡಳಿತ ಚೆನ್ನಾಗಿದ್ದರೂ ಕ್ರಮೇಣ ಭ್ರಷ್ಟಾಚಾರ ತುಂಬಿದ್ದರಿಂದ 1931 ರಲ್ಲಿ ಬ್ರಿಟಿಷರೇ ಮೈಸೂರಿನ ಆಡಳಿತವನ್ನು ವಹಿಸಿಕೊಂಡರು. ಇಲ್ಲಿಂದ 1881 ರ ವರೆಗೂ 'ಆಯುಕ್ತ ಮಂಡಳಿ' ಆಡಳಿತ ನಡೆಸಿತು. 1881 ರಲ್ಲಿ ಮತ್ತೆ ಒಡೆಯರಿಗೆ ಆಡಳಿತವನ್ನು ಒಪ್ಪಿಸಲಾಯಿತು. 1834 ರಲ್ಲಿ ಬ್ರಿಟಿಷರು ಕೊಡಗನ್ನು ಸ್ವಾಧೀನಪಡಿಸಿಕೊಂಡರು. ಮಂಗಳೂರು ಮತ್ತು ಬಳ್ಳಾರಿ ಪ್ರದೇಶಗಳು ಮದ್ರಾಸು ಪ್ರಾಂತಕ್ಕೆ ಸೇರಿಕೊಂಡು ಬ್ರಿಟಿಷರ ನೇರ ಆಡಳಿತದಲ್ಲೇ ಇತ್ತು. ಉತ್ತರ ಕರ್ನಾಟಕದ ಹಲವಾರು ಚಿಕ್ಕ ಪುಟ್ಟ ಸಂಸ್ಥಾನಗಳು ಹಾಗೂ ಹೈದರಾಬಾದ್ ಸಂಸ್ಥಾನವು 1947 ರ ವರೆಗೂ ಬ್ರಿಟಿಷರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಆಡಳಿತ ನಿರ್ವಹಿಸುತ್ತಿದ್ದವು.[12]

ಈ ಅವಧಿಯಲ್ಲಿ ಕರ್ನಾಟಕದ ಎಲ್ಲೆಡೆ ಇಂಗ್ಲಿಷ್ ಭಾಷೆಯ ಪ್ರಭಾವ ಗಮನಾರ್ಹ ಪ್ರಮಾಣದಲ್ಲಿ ಉಂಟಾಯಿತು. ಬ್ರಿಟಿಷರಿಗೆ ಹೆಚ್ಚಿನ ದೇಶೀಯ ಅರಸರು ನಿಷ್ಠರಾಗಿದ್ದುದ ರಿಂದ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಅವರೇ ಪ್ರೋತ್ಸಾಹ ನೀಡಿದ್ದರು. ಉದಾಹರಣೆಗೆ ಮೈಸೂರಿನಲ್ಲಿ 1833 ರಲ್ಲಿ ಒಂದು ಇಂಗ್ಲಿಷ್ ಶಾಲೆಯನ್ನು ಸ್ಥಾಪಿಸಿದರು. ಅನೇಕ ಮಿಶನರಿಗಳೂ ಮುಖ್ಯ ನಗರಗಳಾದ ಬೆಂಗಳೂರು, ಧಾರವಾಡ, ಬೆಳಗಾವಿ, ಮಂಗಳೂರು ಮೊದಲಾದೆಡೆ ಇಂಗ್ಲಿಷ್ ಶಾಲೆಗಳನ್ನು ತೆರೆದವು. ಆದರೆ ದೇಶಭಾಷೆಯಾದ ಕನ್ನಡ ಶಾಲೆ ಗಳಿಗೂ ಸಮಾನವಾಗಿ ಪ್ರೋತ್ಸಾಹ ದೊರಕಿತು. ಆದರೆ ಜನರು ಇಂಗ್ಲಿಷ್ ವಿದ್ಯಾಭ್ಯಾಸದ ಕಡೆಗೆ ಹೆಚ್ಚಿನ ಒಲವು ತೋರಿಸಿದಂತೆ ಕಂಡುಬರುತ್ತದೆ.[13] ಹಾಗೆಯೇ ಜನರ ಒತ್ತಾಯ ದಿಂದ ಶಾಲೆಗಳನ್ನು (ಇಂಗ್ಲಿಷ್ ಶಾಲೆ) ತೆರೆದ ಉದಾಹರಣೆಗಳಿವೆ.[14]

ಬ್ರಿಟಿಷ್ ಆಡಳಿತದಲ್ಲಿ ಕರ್ನಾಟಕದಲ್ಲಿ ದೇಶಭಾಷೆಗಳಿಗೆ ಅನೇಕ ರೀತಿ ಪ್ರೋತ್ಸಾಹ ನೀಡಲು ಯತ್ನಿಸಲಾಗುತ್ತಿತ್ತೆಂಬುದು ನಿಜ. ಕೆಲವು ಆಂಗ್ಲ ಅಧಿಕಾರಿಗಳು ಆಡಳಿತ ಹಾಗೂ ಶಿಕ್ಷಣದಲ್ಲಿ ಕನ್ನಡಕ್ಕೆ ಸಾಕಷ್ಟು ಪ್ರಾಮುಖ್ಯತೆ ನೀಡಿದ್ದರು.[15] "ಒಟ್ಟು ಆಡಳಿತೆಯ ಸೌಕರ್ಯಕ್ಕೆ ಇಂಗ್ಲಿಷ್ ಭಾಷೆಯನ್ನು ಸಂಪರ್ಕ ಭಾಷೆಯಾಗಿ ಇಟ್ಟು ಕೊಂಡಿದ್ದರೂ ಪ್ರಾದೇಶಿಕ ಮಟ್ಟದಲ್ಲಿ ಪ್ರಾದೇಶಿಕ ಭಾಷೆಯೇ ಎಲ್ಲ ಕ್ಷೇತ್ರಗಳನ್ನು ಆವರಿಸಬೇಕೆಂಬುದು ಆಂಗ್ಲ ಅಧಿಕಾರಿಗಳ ನೀತಿಯಾಗಿತ್ತು" ಎಂದು ಮಹದೇವ ಬಣಕಾರ ಅವರು ಸ್ಪಷ್ಟಪಡಿಸಿದ್ದಾರೆ.[16] ಧಾರವಾಡ, ಬೆಳಗಾವಿ ಪ್ರದೇಶಗಳಲ್ಲಿ ಡೆ.ಚೆನ್ನಬಸಪ್ಪ ಮೊದಲಾದವರ ಶೈಕ್ಷಣಿಕ ಚಟುವಟಿಕೆಗಳಿಂದ ಕನ್ನಡ ಮಾಧ್ಯಮ ಶಾಲೆಗಳು ಪ್ರಚುರಗೊಂಡವು. ಆದರೂ ಒಟ್ಟು ಕರ್ನಾಟಕದಲ್ಲಿ ಇಂಗ್ಲಿಷ್ ಶಿಕ್ಷಣದ ಕಡೆಗೆ ಜನರ ಒಲವು ಹೆಚ್ಚಾಗಿದ್ದಿತು. ಮುಖ್ಯವಾಗಿ ಮೇಲ್ವರ್ಗದವರು ಸರಕಾರಿ ಉದ್ಯೋಗ ಪಡೆಯುವ ಹಂಬಲದಿಂದ ಇಂಗ್ಲಿಷ್ ಕಲಿಯುತ್ತಿದ್ದರು. ಇದರಿಂದ, ಕರ್ನಾಟಕದಲ್ಲಿ ಜನಸಾಮಾನ್ಯರು ಇಂಗ್ಲಿಷ್ ಭಾಷೆಯತ್ತ ತೋರಿದ ಒಲವು ಇಂಗ್ಲಿಷ್ ಶಿಕ್ಷಣ ವ್ಯಾಪಕವಾಗಲು ಕಾರಣವಾಯಿತೆಂದು ತಿಳಿಯಬಹುದು. 19ನೇ ಶತಮಾನದ ಉತ್ತರಾರ್ಧದಲ್ಲಿ ಹಾಗೂ 20ನೇ ಶತಮಾನದ ಆರಂಭದ ದಶಕಗಳಲ್ಲಿ ಸ್ವಾತಂತ್ರ್ಯ ಚಳುವಳಿಯೂ ಹಬ್ಬತೊಡಗಿತು. ಇದರಿಂದ, ಆ ಕಾಲದಲ್ಲಿ ಕೆಲವು ಹೋರಾಟಗಾರರಾದರೂ ಜನರಲ್ಲಿ ರಾಷ್ಟ್ರೀಯತೆಯನ್ನೂ, ದೇಶಾಭಿಮಾನವನ್ನೂ ಜೊತೆಯಲ್ಲಿ ಭಾಷಾಭಿಮಾನವನ್ನೂ ಹರಡುವಲ್ಲಿ ಸಫಲರಾದರು.

ಸ್ವಾತಂತ್ರ್ಯ ಚಳವಳಿ ಮತ್ತು ಏಕೀಕರಣ ಚಳವಳಿ ಕನ್ನಡನಾಡಿನಲ್ಲಿ ಆರಂಭವಾಗುವವರೆಗೆ ಇಂಗ್ಲಿಷ್ ಬಗೆಗೆ ಜನರಿಗಿದ್ದ ಭಾವನೆ, ಸ್ವೀಕಾರ ಮನೋಭಾವ. ಇದು ಅನ್ಯಭಾಷೆಯ ಜ್ಞಾನದಿಂದ ಲಭಿಸಬಹುದಾದ ಅರಿವಿನ ಕಾರಣದಿಂದಾಗಲೀ ಪರಭಾಷಾ ಪ್ರೀತಿಯಿಂದ ಉಂಟಾದ ವಿಶಾಲಭಾವನೆಯಿಂದಾಗಲೀ ಉಂಟಾಗಿದ್ದ ಸ್ವೀಕಾರಭಾವವಲ್ಲ; ಅದು ಆಡಳಿತಸೂತ್ರ ಹಿಡಿದವರನ್ನು ಆಶ್ರಯಿಸಲೇಬೇಕಾದ ಸಂದರ್ಭದಲ್ಲಿ ಅನಿವಾರ್ಯವಾಗಿ ಜನರ ಮನಸ್ಸಿನಲ್ಲಿ ಉಂಟಾಗುವ ಅಭಿಮಾನ ಪರಿವರ್ತನೆ. ರಾಜಕೀಯ, ವ್ಯಾವಹಾರಿಕ ಲಾಭಗಳಿಗಾಗಿ ಅನ್ಯಭಾಷೆಯನ್ನು ಸ್ವೀಕರಿಸುವ, ತನ್ನದಾಗಿ ಮಾಡಿಕೊಳ್ಳುವ ಈ ಪ್ರವೃತ್ತಿಯನ್ನು ಒಂದು ಬಗೆಯ ದಾಸ್ಯತೆಯೆಂದೇ ಕರೆಯಬಹುದು. ಇದರಿಂದ, ಒಂದೆಡೆ ಆಡಳಿತ ವ್ಯವಸ್ಥೆ ಬಲಗೊಳ್ಳುತ್ತಲೂ, ಇನ್ನೊಂದೆಡೆ ಜನತೆಯ ಸಂಸ್ಕೃತಿ, ಅಭಿಮಾನ, ಸ್ವಾತಂತ್ರ್ಯಗಳು ದುರ್ಬಲವಾಗುತ್ತಲೂ ಬಂದವು. ಆ ಸ್ಥಿತಿ ಬದಲಾಗಲು ಹೊಸ ಜಾಗೃತಿ ಮತ್ತು ಹೊಸ ಚಳವಳಿ ಅಗತ್ಯವಾಯಿತು.

## 2. ದೇಶೀಯತೆ:

19ನೇ ಶತಮಾನದ ಉತ್ತರಾರ್ಧದಲ್ಲಿ ಸ್ವಾತಂತ್ರ್ಯ ಹೋರಾಟ ಭಾರತದಲ್ಲೆಲ್ಲ ಹರಡುತ್ತಿದ್ದಂತೆ ಇಂಗ್ಲಿಷ್ ವಿರೋಧಿ ನಿಲುವೂ ಸ್ವದೇಶೀ ಅಭಿಮಾನವೂ ಕೆಲವರಲ್ಲಿ ಜಾಗೃತವಾಯಿತು. 1857 ರಲ್ಲಿ ನಡೆದ ಮೊದಲ ಸ್ವಾತಂತ್ರ್ಯ ಸಂಗ್ರಾಮದ ಬಳಿಕ ಭಾರತ ಪೂರ್ಣವಾಗಿ ಬ್ರಿಟಿಷರ ಕೈಯಲ್ಲಾಯಿತು. ಆಗ ಆಡಳಿತ ವಿಭಾಗಕ್ರಮದಲ್ಲಿ ಭಾಷೆಯನ್ನು ಲಕ್ಷಿಸದೆ 1874 ರಲ್ಲಿ ಬಂಗಾಳದ ಸಿಲ್ಹೆಟ್ ಜಿಲ್ಲೆಯನ್ನು ಅಸ್ಸಾಮಿಗೆ ಸೇರಿಸಿದುದೂ, 1876 ರಲ್ಲಿ ಹರಿದು ಹಂಚಿಹೋದ ಒರಿಯಾ ಭಾಷಾಪ್ರದೇಶಗಳನ್ನು ಒಂದುಗೂಡಿಸಿ ಒಂದೇ ಆಡಳಿತದಲ್ಲಿರಿಸಬೇಕೆಂಬ ಬೇಡಿಕೆಯೂ ಪ್ರಾದೇಶಿಕ ಭಾಷೆ ಮತ್ತು ಆಡಳಿತ ಒಂದೇ ಆಗಿರಬೇಕೆಂಬ ಕಲ್ಪನೆ ಭಾರತದಲ್ಲಿ ಬೆಳೆಯಲು ಕಾರಣವಾಯಿತು. 1895 ರಲ್ಲಿ ಇದಕ್ಕೆ ಒರಿಸ್ಸಾ ಕಮಿಶನರ್ ಆಗಿದ್ದ ಕುಕ್ ಅವರಿಂದ ಅಧಿಕೃತ ಬೆಂಬಲ ಕೂಡ ದೊರೆಯಿತು. ಬ್ರಿಟಿಷರಿಗೆ ಪ್ರಾಂತಭಾಷೆಯಲ್ಲಿ ಆಡಳಿತ ನಡೆಸುವುದರಲ್ಲಿ ಸಮ್ಮತಿ ಇತ್ತೆಂಬುದಕ್ಕೆ ನಾಲ್ಕಾರು ಪ್ರಾಂತಗಳಲ್ಲಿ ಹಂಚಿಹೋಗಿದ್ದ ಕರ್ನಾಟಕದ ಪ್ರದೇಶಗಳಲ್ಲೂ ಕನ್ನಡದಲ್ಲೇ ಆಡಳಿತ ನಡೆಸುತ್ತಿದ್ದರು — ಎಂಬುದು ನಿದರ್ಶನವಾಗಿದೆ.[18] ಇದು ಬಹುಶಃ ಬ್ರಿಟಿಶ್ ವಿರುದ್ಧ ಏಳುತ್ತಿದ್ದ ಹೋರಾಟವನ್ನು ಕಡಿಮೆ ಮಾಡಲು ಸರಕಾರದ ಆಡಳಿತವನ್ನು ಜನರು ಮೆಚ್ಚುವಂತೆ ಮಾಡಲು ಬ್ರಿಟಿಷರು ಕಂಡುಕೊಂಡಿರಬಹುದಾದ ಆಡಳಿತ ಸುಧಾರಣೆ ಎನ್ನಬಹುದು. ಕನ್ನಡ ಬಲ್ಲ ಬ್ರಿಟಿಷರನ್ನು ಮಾತ್ರವೇ ಉದ್ಯೋಗದಲ್ಲಿ ಹಾಗೂ ಉನ್ನತ ಸ್ಥಾನಗಳಲ್ಲಿ ಸೇರಿಸಿಕೊಳ್ಳುತ್ತಿದ್ದರು — ಎಂಬುದರಿಂದ, ಬ್ರಿಟಿಷರು ಆಡಳಿತದಲ್ಲಿ ಕನ್ನಡಕ್ಕೆ ಮಹತ್ವ ನೀಡಿದ್ದರೆಂಬುದು ಸ್ಪಷ್ಟವಾಗುತ್ತದೆ. ಪ್ರಾದೇಶಿಕ ಭಾಷಾ ಶಿಕ್ಷಣಕ್ಕೂ ಬ್ರಿಟಿಷರು ಮಹತ್ವ ನೀಡಿದ್ದರು. ಹೀಗಿದ್ದೂ ಇಂಗ್ಲಿಷ್ ಹಿಡಿತ ಆಡಳಿತ ಶಿಕ್ಷಣದಲ್ಲಿ ಬಲವಾಗಿ ಮುಂದುವರಿದದ್ದಕ್ಕೆ ಬೇರೆ ಕಾರಣಗಳಿದ್ದಿರಬೇಕು. ಇಂಗ್ಲಿಷ್ ಶಿಕ್ಷಣ ಪಡೆದ ಮೇಲ್ವರ್ಗದವರು ದೇಶಭಾಷಾ ಶಿಕ್ಷಣ ಪಡೆದವರಿಗಿಂತ ಹೆಚ್ಚು ವ್ಯಾವಹಾರಿಕ, ಆರ್ಥಿಕ ಹಾಗೂ ಸಾಮಾಜಿಕ ಸ್ಥಾನಮಾನ ಪಡೆದುಕೊಂಡದ್ದು ಅದಕ್ಕೆ ಕಾರಣವಾಯಿತು.

1903 ರಲ್ಲಿ 'ಸಂಯುಕ್ತ ಉತ್ಕಲ ಪರಿಷತ್ತು' ಭಾಷಾ ಚಳುವಳಿಯಲ್ಲಿ ತೊಡಗಿತು. 1905 ರಲ್ಲಿ ಬಂಗಾಳ ವಿಭಜನೆಯಾದಾಗ ಅಲ್ಲಿನ ಜನಸಾಮಾನ್ಯರಲ್ಲಿ

ಉಂಟಾದ ಭಾಷಾಜಾಗೃತಿ ಭಾರತದೆಲ್ಲೆಡೆ ವ್ಯಾಪಿಸತೊಡಗಿತು. ''ರಾಷ್ಟ್ರೀಯ ಭಾವನೆಯೊಡನೆ ಆಯಾ ಭಾಷೆಗಳ ಅಭಿಮಾನವೂ ಸೇರಿ, ಇಡೀ ಭಾರತವು ತಲ್ಲಣಿಸಿತು''.[19]

ಕರ್ನಾಟಕದಲ್ಲಿ ವಂಗಭಂಗ ಚಳವಳಿಯ ಪ್ರಭಾವ ಬಹಳ ಪರಿಣಾಮಕಾರಿಯಾಯಿತು. ಆಲೂರ ವೆಂಕಟರಾವ್ ಮೊದಲಾದವರಲ್ಲಿ ಭಾಷಾಭಿಮಾನವನ್ನೂ ರಾಷ್ಟ್ರೀಯತೆಯನ್ನೂ ಪ್ರೇರೇಪಿಸಲು ಇದೇ ಕಾರಣವಾಯಿತು.[20] 1911 ರಲ್ಲಿ ಹಿಂದೀ ಮಾತನಾಡುವ ಜನರೇ ಹೆಚ್ಚಿರುವ ಬಿಹಾರ ಪ್ರದೇಶವನ್ನು ಬಂಗಾಳದಿಂದ ಪ್ರತ್ಯೇಕ ಆಡಳಿತ ಘಟಕವಾಗಿ ಮಾಡಲಾಯಿತು. ಇದರೊಂದಿಗೆ ಛೋಟಾನಾಗಪುರ ಮತ್ತು ಒರಿಸ್ಸಾ ಸೇರಿತ್ತು. 1937 ರಲ್ಲಿ ನೈಮನ್ ಸಮಿತಿಯ ವರದಿಯನ್ವಯ ಸಿಂಧ್ ಹಾಗೂ ಒರಿಸ್ಸಾ ಪ್ರತ್ಯೇಕ ರಾಜ್ಯಗಳಾದವು. ಕರ್ನಾಟಕದಲ್ಲಿ ಏಕೀಕರಣ ಚಳವಳಿ ಬಹಳ ತೀವ್ರವಾಗಿ ನಡೆದಿದ್ದರೂ, ಅದು ಸಂಪೂರ್ಣವಾಗಿ ಒಂದುಗೂಡಿದ್ದು (ಇಂದಿನ ಸ್ಥಿತಿಯಲ್ಲಿ) 1956 ರಲ್ಲಿ. ಅಲ್ಲಿಯವರೆಗೂ ಸ್ವಾತಂತ್ರ್ಯದೊಂದಿಗೆ ಸೇರಿಕೊಂಡೂ ಪ್ರತ್ಯೇಕವಾಗಿಯೂ ನಡೆದ ಏಕೀಕರಣ ಚಳವಳಿ ಕನ್ನಡತನ, 'ಕರ್ನಾಟಕತ್ವ', ಕನ್ನಡಾಭಿಮಾನಗಳನ್ನು ಜನರಲ್ಲಿ ಪ್ರೇರೇಪಿಸಲು ಕಾರಣವಾಯಿತು.

ಈ ಸಂದರ್ಭದಲ್ಲಿ ಎರಡು ವಿಷಯಗಳನ್ನು ಗಮನಿಸಬೇಕು. (1) ರಾಷ್ಟ್ರೀಯ ಚಳವಳಿ ಮತ್ತು ಪ್ರಾದೇಶಿಕ ಭಾಷಾ ಜಾಗೃತಿಯ ನಡುವೆ ಸಂಬಂಧವುಂಟಾದುದು.
(2) ಬ್ರಿಟಿಷರು ಪ್ರಾದೇಶಿಕ ಭಾಷಾ ಜಾಗೃತಿಗೆ ಬೆಂಬಲ ನೀಡಿದುದು.

## (1) ರಾಷ್ಟ್ರೀಯ ಚಳವಳಿ ಮತ್ತು ಪ್ರಾದೇಶಿಕ ಭಾಷಾಜಾಗೃತಿ

ಸ್ವಾತಂತ್ರ್ಯ ಹೋರಾಟದಲ್ಲಿ ಬಹಳ ಮುಖ್ಯ ಪಾತ್ರ ವಹಿಸಿದ ವಂಗಭಂಗ ಚಳವಳಿಯ ಹಿನ್ನೆಲೆಯಲ್ಲಿ ರಾಷ್ಟ್ರೀಯ ಹೋರಾಟದ ಭಾವನೆಯೇ ಪ್ರಬಲವಾಗಿತ್ತೇ ಅಥವಾ ಭಾಷಾಭಿಮಾನವೇ ಪ್ರಬಲವಾಗಿತ್ತೇ ಎಂಬುದನ್ನು ನೋಡುವಾಗ, ಇವೆರಡೂ ಸ್ವದೇಶೀ ಜಾಗೃತಿಯ ಅಂಗವಾಗಿ ಉಂಟಾಗಿದ್ದವು ಎಂದು ತಿಳಿಯಬಹುದಾಗಿದೆ. ಜನರು ತಾವು ಆಡುವ ಭಾಷೆಯನ್ನು ಮರೆತು ರಾಷ್ಟ್ರೀಯತೆ ಅಥವಾ ಸ್ವದೇಶೀ ಭಾವನೆಯನ್ನು ಕಂಡುಕೊಳ್ಳ

ಲಾರರು ಎಂಬುದಕ್ಕೆ ವಂಗಭಂಗ ಚಳವಳಿ ಉತ್ತಮ ಉದಾಹರಣೆಯಾಗಿದೆ. ಅಲ್ಲಿ ರಾಷ್ಟ್ರೀಯ ಏಕತೆಗೆ ಪ್ರಾಂತೀಯ ಅಭಿಮಾನ ತಡೆಯಾಗುವ ಪ್ರಶ್ನೆಯೇ ಇರಲಿಲ್ಲ. ಬದಲಾಗಿ, ರಾಷ್ಟ್ರೀಯ ಚಳವಳಿಗೆ ಪ್ರೇರಕವಾಗಿತ್ತು. ಒರಿಸ್ಸಾದಲ್ಲುಂಟಾದ ಚಳವಳಿಯನ್ನೂ ಕರ್ನಾಟಕದಲ್ಲುಂಟಾದ ಭಾಷಾ ಚಳವಳಿಯನ್ನೂ ಈ ದೃಷ್ಟಿಯಿಂದಲೇ ನೋಡಬೇಕು. ಇದನ್ನು ಗಮನಿಸುವಾಗ, ನಾಡು, ಸಂಸ್ಕೃತಿ, ಜನಾಂಗಗಳಿಂದ ಭಾಷೆ ಬೇರೆಯಲ್ಲವೆಂಬುದೂ ಇವುಗಳ ಏಕತೆಯಿಂದಲೇ ಒಂದು ದೇಶ ಅಥವಾ ನಾಡಿಗೆ ಶಕ್ತಿ ಉಂಟಾಗುತ್ತದೆ ಎಂಬುದೂ ವ್ಯಕ್ತವಾಗುತ್ತದೆ.

ಕರ್ನಾಟಕದಲ್ಲಿ ರಾಷ್ಟ್ರೀಯತೆ ಮತ್ತು ಸ್ವಾತಂತ್ರ್ಯ ಸಂಗ್ರಾಮ ಭಾರತದ ಉಳಿದ ಪ್ರದೇಶಗಳಲ್ಲಿ — ಮುಖ್ಯವಾಗಿ ಉತ್ತರ ಭಾರತದಲ್ಲಿ — ಉಂಟಾದಷ್ಟು ಬೇಗನೆ ಉಂಟಾಗದಿರಲು ಕಾರಣ,ಒಂದೇ ಭಾಷೆಯ ಪ್ರದೇಶ ಹಲವಾರು ಆಡಳಿತದಲ್ಲಿ ಹಂಚಿ ಹೋದದ್ದರಿಂದ ಪ್ರಾದೇಶಿಕವಾಗಿ ಹಾಗೂ ಭಾಷಿಕವಾಗಿ 'ಕರ್ನಾಟಕ' ವೆಂಬ ಎಚ್ಚರ ಕನ್ನಡಿಗರಲ್ಲೇ ಇಲ್ಲದಿದ್ದುದು — ಎಂಬುದು ಖಚಿತವಾದ ಅಂಶವಾಗಿದೆ.[21]

1920 ರಲ್ಲಿ ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕಕ್ಕೆ, ಕಾಂಗ್ರೆಸ್ ಆಡಳಿತದಲ್ಲಿ ಸ್ವತಂತ್ರ ಸ್ಥಾನ ದೊರಕಿತು. ಇದರಿಂದ 'ಕರ್ನಾಟಕ' ತಳಹದಿಯ ಮೇಲೆ ಕಾಂಗ್ರೆಸ್ಸಿನ ಚಟುವಟಿಕೆ ಬಿರುಸಾಗಿ ನಡೆಯಿತು. ರಾಷ್ಟ್ರೀಯ ನಾಯಕರಾದ ತಿಲಕ್, ಗಾಂಧಿ ಮುಂತಾದವರ ಅಭಿಪ್ರಾಯಗಳಲ್ಲಿ ಶಿಕ್ಷಣದಲ್ಲಿ ಪ್ರಾದೇಶಿಕ ಭಾಷೆಗೇ ಪ್ರಾಮುಖ್ಯತೆ ಯಿರಬೇಕೆಂಬ ವಿಚಾರ ಸ್ಪಷ್ಟವಾಗಿತ್ತು. ಆದರೆ ತಿಲಕರಿಗೆ ಮೊದಲು ಭಾಷಾನ್ವಯ ಪ್ರಾಂತರಚನೆಯಲ್ಲಿ ಅನುಕೂಲ ಅಭಿಪ್ರಾಯವಿರಲಿಲ್ಲವೆಂಬುದೂ, ಅನಂತರ ರಾಷ್ಟ್ರೀಯತೆ ಹರಡಲು ಅದು ಅನುಕೂಲವಾಗಬಹುದೆಂಬ ಕಾರಣದಿಂದ 1920 ರ ಕಾಂಗ್ರೆಸ್ ಚುನಾವಣಾ ಘೋಷಣೆಯಲ್ಲಿ ಅದನ್ನು ಸಮರ್ಥಿಸಿದರೆಂಬುದೂ, ಆಗಿನ ರಾಷ್ಟ್ರೀಯ ನಾಯಕರಲ್ಲಿ ಪ್ರಾಂತ — ಭಾಷೆ ಹಾಗೂ ರಾಷ್ಟ್ರೀಯ ಏಕತೆಯ ಕುರಿತು ಅಭಿಪ್ರಾಯ ಭೇದಗಳಿದ್ದ ವೆಂಬುದನ್ನು ಸೂಚಿಸುತ್ತದೆ. ಆದರೆ ಇಲ್ಲಿನ ರಾಷ್ಟ್ರೀಯ ಏಕತೆ ಇಂಗ್ಲಿಷನ ಅಗತ್ಯವನ್ನು ಸರ್ವಥಾ ಹೇಳುವಂತಹದಾಗಿರಲಿಲ್ಲ — ಎಂಬುದು ಬಹಳ ಮುಖ್ಯ ವಿಚಾರ.

## (2) ಪ್ರಾದೇಶಿಕ ಭಾಷೆಗಳಿಗೆ ಬ್ರಿಟಿಷರ ಬೆಂಬಲ

1835 ರಲ್ಲಿ ಲಾರ್ಡ್ ವಿಲಿಯಂ ಬೆಂಟಿಂಕನ ಘೋಷಣೆಯ ಪ್ರಕಾರ ಭಾರತೀಯರಿಗೆ ಇಂಗ್ಲಿಷ್ ಶಿಕ್ಷಣ ಕ್ರಮದಲ್ಲಿ ವಿದ್ಯಾಭ್ಯಾಸ ನೀಡಲು ಆರಂಭಿಸಿದರೂ, ಅದರಿಂದ ಶಿಕ್ಷಣ ವ್ಯವಸ್ಥೆಯ ಮೇಲೆ ಉಂಟಾದ ದುಷ್ಪರಿಣಾಮಗಳನ್ನು ಮನಗಂಡು ಪ್ರಾದೇಶಿಕ ಭಾಷೆಗಳಲ್ಲೂ ವಿದ್ಯಾಭ್ಯಾಸ ನೀಡುವ ಅನೇಕ ಸುಧಾರಣೆಗಳನ್ನು ಬ್ರಿಟಿಷ್ ಸರಕಾರ ಜಾರಿಗೆ ತಂದಿತು. ವಸಾಹತುಶಾಹಿ ಪ್ರಭುತ್ವವನ್ನು ಸ್ಥಿರಗೊಳಿಸಲು ಬ್ರಿಟಿಷರು ಆರಂಭದಲ್ಲಿ ಇಂಗ್ಲಿಷನ್ನು ಒಂದು ಸಾಧನವಾಗಿ ಬಳಸಿದರೂ, ತಮ್ಮ ಆಡಳಿತ ಭದ್ರವಾದ ಬಳಿಕ ಪ್ರಾದೇಶಿಕ ಭಾಷೆಯಲ್ಲಿ ಆಡಳಿತ, ಶಿಕ್ಷಣಗಳನ್ನು ನಡೆಸಲು ವಿಶೇಷವಾಗಿ ಶ್ರಮಿಸಿದರು. ಕರ್ನಾಟಕದಲ್ಲಿ ಮುನ್ರೋ, ರಸೆಲ್, ರೈಸ್ ಮೊದಲಾದವರು ಕನ್ನಡಕ್ಕೆ ಮಹತ್ವ ನೀಡಿದ್ದರು. ಕಷ್ಟಪಟ್ಟು ಅನುವಾದಿಸಿ ಅಧಿಸೂಚನೆಗಳನ್ನೂ ನೋಟೀಸುಗಳನ್ನೂ ಹೊರಡಿಸುತ್ತಿದ್ದರು. ಸರಕಾರಿ ಉದ್ಯೋಗಸ್ಥರಾಗಿ ಸೇರಬೇಕಿದ್ದವರು ಕನ್ನಡ ಪರೀಕ್ಷೆಗಳನ್ನು ಪಾಸು ಮಾಡುವುದು ಕಡ್ಡಾಯವಾಗಿತ್ತು. ಆದರೆ ಉನ್ನತ ಶಿಕ್ಷಣದಲ್ಲೂ ವಿಜ್ಞಾನ, ತಂತ್ರಜ್ಞಾನ ಶಿಕ್ಷಣದಲ್ಲೂ ಇಂಗ್ಲಿಷ್ ಮಾಧ್ಯಮವೇ ಇರುವುದು ಅನಿವಾರ್ಯವಾಯಿತು. ಆಗ ರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆಯಲು ಇಂಗ್ಲಿಷ್ ಭಾಷೆಯ ಪತ್ರಿಕೆಗಳು ಪ್ರಭಾವಶಾಲಿಯಾಗಿದ್ದವೆಂಬುದನ್ನು 1946ನೇ ಇಸವಿಯಲ್ಲಿ ಮುಂಬಯಿಯಲ್ಲಿ ನಡೆದ ಕರ್ನಾಟಕ ಏಕೀಕರಣ ಪರಿಷತ್ತಿನ ಸ್ವಾಗತಾಧ್ಯಕ್ಷರಾದ ಶ್ರೀ ರಂಗಾಚಾರ್ಯ ಜಹಗೀರುದಾರರ ಮಾತುಗಳು ಸೂಚಿಸುತ್ತವೆ:

"ಇಂದಿನವರೆಗೆ ಕರ್ನಾಟಕ ಏಕೀಕರಣ ಪರಿಷತ್ತಿನ ಒಂಭತ್ತು ಅಧಿವೇಶನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಕೂಡಿದವು. ಆದರೆ ಇಂಗ್ಲಿಷ್ ವೃತ್ತಪತ್ರಿಕೆಗಳಲ್ಲಿ ಇವುಗಳ ಬಗ್ಗೆ ಏನೂ ಪ್ರಸಿದ್ಧಿ ದೊರೆಯಲಿಲ್ಲ. ಹಿಂದುಸ್ತಾನದೊಳಗಿನ ಉಳಿದ ಪ್ರಾಂತದ ಜನರಿಗೆ ಕರ್ನಾಟಕವು ಒಂದು ಸ್ವತಂತ್ರ ಪ್ರಾಂತವನ್ನು ಬೇಡುತ್ತದೆ ಎಂಬ ಕಲ್ಪನೆಯೂ ಸಹ ಇಲ್ಲ. ಕರ್ನಾಟಕದಲ್ಲಿ ಈ ಬೇಡಿಕೆಯನ್ನು ಆಳರಸರಿಗೂ ಮತ್ತು ಹಿಂದೂಸ್ತಾನದ ಎಲ್ಲ ಮುಂದಾಳುಗಳಿಗೂ ತಿಳಿಸುವುದಕ್ಕಾಗಿ ಮುಂಬಯಿಯಲ್ಲಿ ಈ ಸಭೆಯನ್ನು ಕರೆದಿದ್ದೇವೆ ಮತ್ತು ಈ ಕ್ಷಣಕ್ಕೆ ರಾಜಕೀಯ ಚಳವಳಿಗಳ ಸೂತ್ರಗಳು

ಮುಂಬಯಿ ಮುಂದಾಳುಗಳ ಕೈಯಲ್ಲಿರುವುದರಿಂದ ಹಾಗೂ ಇಲ್ಲಿ ಕೈಗೊಂಡ ನಿರ್ಣಯಗಳಿಗೆ ವೃತ್ತಪತ್ರಿಕೆಗಳಾದರೂ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವವೆಂಬ ನಂಬಿಕೆಯಿಂದ ಈ ಅಧಿವೇಶನವನ್ನು ಇಲ್ಲಿ ಕೂಡಿಸಿದ್ದೇವೆ.''[22]

ಆ ಸಮಯಕ್ಕಾಗಲೇ ಭಾರತದ ಎಲ್ಲೆಡೆ ಉಂಟಾಗಿದ್ದ ವಾಹನ ಸಂಪರ್ಕ ವ್ಯವಸ್ಥೆ ಅದುವರೆಗೆ ಇಲ್ಲದಿದ್ದ ಭಾಷಾವೈವಿಧ್ಯತೆ ಮತ್ತು ರಾಷ್ಟ್ರೀಯ ಏಕತೆಗಳ ನಡುವಿನ ಸಮನ್ವಯವನ್ನು ಉಂಟುಮಾಡತೊಡಗಿದ್ದವು — ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ರಾಷ್ಟ್ರೀಯ ಚಳವಳಿಯೊಂದಿಗೆ ಹಿಂದೀ ಭಾಷಾಭಿಮಾನವೂ ಉತ್ತರಭಾರತದಲ್ಲಿ ಹರಡಿ, ಅದೇ ಭಾರತದ ರಾಷ್ಟ್ರಭಾಷೆಯೆಂಬ ಕಲ್ಪನೆ ಆಗ ರಾಷ್ಟ್ರೀಯ ನಾಯಕರಲ್ಲಿ ಹರಡಿತ್ತು. ಗಾಂಧೀಜಿ ಕೂಡ ಹಿಂದೀ ಭಾಷೆಯನ್ನು ರಾಷ್ಟ್ರಭಾಷೆ ಎಂದು ಸ್ವೀಕರಿಸಿದರು; ಆದರೆ ಪ್ರಾಂತೀಯ ಭಾಷೆಗಳಿಗೆ ಅನ್ವಯವಾಗಿ ಪ್ರಾಂತವಿಂಗಡನೆಯ ಕಲ್ಪನೆಯನ್ನು ಇಟ್ಟುಕೊಂಡರು. ''ಆದರೆ ಅದು ಪ್ರಾಂತಿಕ ಭಾಷೆಗಳ ಸ್ಥಾನವನ್ನು ಆಕ್ರಮಿಸಲಿಕ್ಕೆ ಅಲ್ಲ. ಅದು ಪ್ರಾಂತಗಳಲ್ಲಿಯ ಶಿಕ್ಷಣದ ಬೋಧ ಭಾಷೆಯೂ ಆಗಲಾರದು.'' ಎಂದು ಗಾಂಧೀಜಿ ಭಾಷಾ ವೈವಿಧ್ಯತೆಯ ವೈಶಿಷ್ಟ್ಯವನ್ನು ಹಾಗೂ ಬೆಳವಣಿಗೆಯನ್ನು ಸರಿಯಾಗಿಯೇ ಗ್ರಹಿಸಿದ್ದರು.[23]

## 3. ಮತ್ತೆ ಇಂಗ್ಲಿಷ್ ದಾಸ್ಯ

1947 ರಲ್ಲಿ ಸ್ವಾತಂತ್ರ್ಯ ದೊರಕಿದ ಬಳಿಕ ಹೊಸ ರಾಷ್ಟ್ರ ನಿರ್ಮಾಣದ ಉತ್ಸಾಹ ಸ್ವಲ್ಪ ಕಾಲ ಜನರಲ್ಲಿತ್ತು. ಆದರೆ ಹೊಸದಾಗಿ ರೂಪುಗೊಂಡ ಸಮಗ್ರ ಭಾರತದ ಆಡಳಿತ, ಸಂವಿಧಾನ ರಚನೆ, ರಾಜಕೀಯ ಸಮಸ್ಯೆಗಳು — ಇವುಗಳ ಕಾರಣ ದಿಂದ, ವ್ಯವಸ್ಥಿತವಾದ ಭಾಷಾನೀತಿಯನ್ನು ರೂಪಿಸಲು ಸಾಧ್ಯವಾಗಲಿಲ್ಲ. ಪ್ರಾಂತ ರಚನೆಯ ವಿಚಾರ ಬಂದಾಗ ಭಾಷಾವಾರು ರಾಜ್ಯಗಳ ರಚನೆಗೆ ಸಾಕಷ್ಟು ಒತ್ತಡವೂ, ಅದರ ಅನಿವಾರ್ಯತೆಯೂ ಇದ್ದುದರಿಂದ ಭಾಷೆಗಳ ನಡುವೆ ವಾದ ವಿವಾದ, ಗೊಂದಲ ಗಳು ಉಂಟಾದದ್ದೂ ನಿಜ. 1956 ರಲ್ಲಿ ಹಾಗೂ ಹೀಗೂ ಭಾಷಾವಾರು ಪ್ರಾಂತಗಳ ರಚನೆ ಪೂರ್ಣವಾಗಿ ನಡೆಯಿತು. ಇಂಗ್ಲಿಷನ್ನು ರಾಷ್ಟ್ರಭಾಷೆಯಾಗಿ ಒಪ್ಪಲು ಜನತೆಯೂ, ನಾಯಕರೂ ಸಿದ್ಧವಿರಲಿಲ್ಲ; ಆದರೆ ಆಡಳಿತಾತ್ಮಕ ಕಾರ್ಯಗಳಲ್ಲಿ ಆ ಹೊತ್ತಿಗಾಗಲೇ ಇಂಗ್ಲಿಷ್ ನೆಲೆಗೊಂಡಿತ್ತು. ಭಾರತದ ವಿವಿಧ ಪ್ರದೇಶಗಳೊಳಗೆ ಸಂಪರ್ಕವೂ, ಹೊರದೇಶಗಳೊಡನೆ ಸಂಪರ್ಕವೂ ಹೊಸ ಆಡಳಿತ ವ್ಯವಸ್ಥೆಯಲ್ಲಿ ಅನಿವಾರ್ಯವಾಗಿತ್ತು — ಆ ಹೊತ್ತಿಗಾಗಲೇ ಇಂಗ್ಲಿಷ್ ಈ ಎಲ್ಲ ಕಾರ್ಯಗಳಲ್ಲಿ ಬಳಕೆಯಾಗತೊಡಗಿತ್ತು. ಆದರೆ ಪರಭಾಷೆ ಹಾಗೂ ಪರಕೀಯ ಆಡಳಿತವನ್ನು ಕೊನೆಗಾಣಿಸಿ ಆ ಸ್ಥಾನದಲ್ಲಿ ಭಾರತೀಯ ಭಾಷೆಯನ್ನು ನೆಲೆಗೊಳಿಸಬೇಕೆಂಬ ಎಚ್ಚರವೂ, ಅದಕ್ಕೆ ಹಿಂದೀ ಭಾಷೆ ಯೋಗ್ಯವೆಂಬ ಅಭಿಪ್ರಾಯವೂ ಆಗ ಭಾರತೀಯ ರಲ್ಲಿ ತೀವ್ರವಾಗಿದ್ದುದರಿಂದ, ಅದೊಂದೇ 'ರಾಷ್ಟ್ರಭಾಷೆ' ಎಂದು ಶಾಸನ ಮಾಡುವ ಒತ್ತಾಯ ಉಂಟಾಯಿತು. ಆದರೆ, ಭಾರತದಲ್ಲಿ ಹಿಂದೀ ಭಾಷೆ ದೇಶದ ಬಹುಸಂಖ್ಯಾತರ ಭಾಷೆಯಲ್ಲ; ಹಲವು ಪ್ರಾದೇಶಿಕ ಭಾಷೆಗಳಲ್ಲಿ ಅದೂ ಒಂದು; ಉಳಿದ ಭಾಷೆಗಳನ್ನಾಡುವ ಜನರಿಗಿಂತ ಹಿಂದೀ ಭಾಷೆಯನ್ನಾಡುವವರ ಸಂಖ್ಯೆ ಹೆಚ್ಚು ಎಂಬ ಕಾರಣಕ್ಕಾಗಿ, ಅದಕ್ಕೆ 'ರಾಷ್ಟ್ರಭಾಷೆ' ಯ ಸ್ಥಾನ ನೀಡಿರುವ ಪಕ್ಷಪಾತದ ಧೋರಣೆ ಉಳಿದ ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೆ ಹಾನಿಕರ — ಎಂಬ ಸಂಗತಿ ಹಿಂದೀತರ ಜನರಿಗೆ ಅರ್ಥವಾಗಲು ಸ್ವಲ್ಪ ಸಮಯ ಹಿಡಿಯಿತು. ಅದು ಮನವರಿಕೆಯಾದೊಡನೆ, ಹಾಗೂ ಹಿಂದಿಗೆ ರಾಷ್ಟ್ರಭಾಷೆ ಯ ಸ್ಥಾನವನ್ನೂ ವಿಶೇಷ ಸವಲತ್ತುಗಳನ್ನೂ ನೀಡಿದ್ದರಿಂದ ಉಂಟಾದ ಪರಿಣಾಮಗಳು ಗೋಚರವಾಗತೊಡಗಿದೊಡನೆ ಹಿಂದೀ ವಿರೋಧ ಭಾವನೆಯೂ, ಹಿಂದಿಗೆ ವಿರುದ್ಧವಾಗಿ ಇಂಗ್ಲಿಷರ ನಿಲುವುಗಳೂ ಕೆಲವು ಪ್ರಾಂತಗಳಲ್ಲಿ — ಮುಖ್ಯವಾಗಿ ತಮಿಳುನಾಡಿನಲ್ಲಿ —

ಮೂಡಿಬಂದವು. ಇದರಿಂದ, ಸಂವಿಧಾನ ರಚನೆಯಾಗಿ ಹದಿನೈದು ವರ್ಷಗಳು ಕಳೆದ ಬಳಿಕವೂ ಇಂಗ್ಲಿಷ್ ಸಂಪರ್ಕ ಭಾಷೆಯಾಗಿ ಮುಂದುವರಿಯಬಹುದು — ಎಂದು ಕೇಂದ್ರ ನಿರ್ಣಯಿಸಿತು. ಆದರೆ ಹಿಂದೀ ಬೆಳವಣಿಗೆಯು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಮುಂದುವರಿಯಿತು. ಪ್ರಾದೇಶಿಕ ಭಾಷೆಗಳ ಅಭಿವೃದ್ಧಿಯನ್ನು ಪ್ರಾಂತಗಳಿಗೇ ಬಿಟ್ಟುಕೊಟ್ಟದ್ದರಿಂದ, ಅವುಗಳಿಗೆ ಕೇಂದ್ರವು ಆರ್ಥಿಕ ಅನುಕೂಲತೆಗಳನ್ನು ಹಿಂದಿಗೆ ನೀಡಿದಂತೆ ನೀಡದದ್ದರಿಂದ, ಅದರ 'ಮಲತಾಯಿ ಧೋರಣೆ' ಮುಂದುವರಿಯಿತು. ಆಡಳಿತ, ಶಿಕ್ಷಣಗಳಲ್ಲಿ ಇಂಗ್ಲಿಷಿಗೆ ಬದಲು ಹಿಂದಿಯನ್ನೂ, ಪ್ರಾದೇಶಿಕ ಭಾಷೆಗಳನ್ನೂ ನೆಲೆಗೊಳಿಸುವ ಯತ್ನ ಆಂಶಿಕವಾಗಿ ಮಾತ್ರ ಸಾಧ್ಯವಾಯಿತು; ಕೇಂದ್ರ — ರಾಜ್ಯಗಳ ಸಂಪರ್ಕಕ್ಕೂ, ಉಳಿದ ವ್ಯವಹಾರಗಳಿಗೂ ಇಂಗ್ಲಿಷ್ ಮುಂದುವರಿಯಿತು.

ಶೈಕ್ಷಣಿಕವಾಗಿ ಇಂಗ್ಲಿಷ್ ಭಾಷೆಯ ಅವಲಂಬನೆ ಸ್ವಾತಂತ್ರ್ಯ ಹೋರಾಟ ಕಾಲದ ನಾಯಕರ ದೃಷ್ಟಿಯಿಂದಲೂ ಆವಶ್ಯಕವಾಗಿತ್ತು. ಆದರೆ ಅದು ಸಂಪೂರ್ಣವಾಗಿ ಇಂಗ್ಲಿಷಿನಿಂದಲೇ ನಡೆಯಬೇಕು — ಎಂದು ಅವರು ಬಯಸಿರಲಿಲ್ಲ. ಕ್ರಮೇಣ ಭಾರತೀಯ ಭಾಷೆಗಳು ಆಧುನಿಕ ಜ್ಞಾನ-ವಿಜ್ಞಾನಗಳನ್ನು ಬೋಧಿಸಲು ಸಮರ್ಥವಾಗುವ ತನಕ ಮಾತ್ರವೇ ಇಂಗ್ಲಿಷಿನ ಅವಲಂಬನೆ ಅಗತ್ಯ; ಆ ಬಳಿಕ ಇಂಗ್ಲಿಷಿನ ಜಾಗದಲ್ಲಿ ಭಾರತೀಯ ಭಾಷೆಗಳೇ ನೆಲೆಗೊಳ್ಳಬೇಕೆಂದು ಎಲ್ಲರ ಧೋರಣೆಯಾಗಿತ್ತು. ಸ್ವಾತಂತ್ರ್ಯಾನಂತರ ಸಮಸ್ಯೆಗಳು ಇನ್ನಷ್ಟು ಜಟಿಲವಾಗತೊಡಗಿದವು. ಒಂದು ಕಡೆಯಲ್ಲಿ ಆಡಳಿತದಲ್ಲೂ, ಔದ್ಯೋಗಿಕ ನೇಮಕಾತಿಯಲ್ಲೂ ಇಂಗ್ಲಿಷ್ ಕಲಿತ ಅಭ್ಯರ್ಥಿಗಳಿಗೆ ಆದ್ಯತೆ ದೊರಕಿದಂತೆಲ್ಲ ಇಂಗ್ಲಿಷ್ ಭಾಷೆಯೇ ಒಳ್ಳೆಯ ಉದ್ಯೋಗ ಪಡೆಯುವವರಿಗೂ, ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಹೆತ್ತವರಿಗೂ ಮುಖ್ಯವಾಯಿತು. ಇನ್ನೊಂದೆಡೆ, ವೈದ್ಯಕೀಯ — ಇಂಜಿನಿಯರಿಂಗ್ ಹಾಗೂ ಇನ್ನಿತರ ವಿಜ್ಞಾನಗಳ ಕಲಿಕೆ ಹೆಚ್ಚು ಹೆಚ್ಚು ವ್ಯಾಪಕವಾದಂತೆ, ಆ ಶಿಕ್ಷಣ ಪಡೆದವರ ಆರ್ಥಿಕ ಸ್ಥಿತಿ ಉತ್ತಮವಾದ ಹಾಗೆ, ಅವುಗಳಿಗೆ ಒಳ್ಳೆಯ ಸ್ಥಾನಮಾನವೂ ದೊರಕತೊಡಗಿತು. ಪ್ರಾದೇಶಿಕ ಭಾಷೆಗಳಲ್ಲಿ ಈ ಕ್ಷೇತ್ರಗಳಿಗೆ ಸಂಬಂಧಿಸಿದ ಗ್ರಂಥಗಳು ರಚನೆಯಾಗುವವರೆಗೂ, ಇಂಗ್ಲಿಷಿನಲ್ಲೇ ಶಿಕ್ಷಣ ಮುಂದುವರಿಯಬೇಕಾಯಿತು. ಪ್ರಾದೇಶಿಕ ಭಾಷೆಗಳಲ್ಲಿ ಹೆಚ್ಚಿನ ಕೆಲಸಗಳು ನಡೆಯದುದರಿಂದ ಅವುಗಳೂ ಬೆಳೆಯಲಿಲ್ಲ; ಇಂಗ್ಲಿಷ್ ಅವಲಂಬನೆಯೂ ಅನಿವಾರ್ಯವಾಯಿತು. ಆಡಳಿತ

ಶಿಕ್ಷಣ, ಉದ್ಯೋಗ, ಇನ್ನಿತರ ವ್ಯವಹಾರಗಳು — ಎಲ್ಲೆಡೆ ಇಂಗ್ಲಿಷ್ ಭಾಷೆ ಮುಂದುವರಿದದ್ದರಿಂದ, ಅದರ ಬಗೆಗೆ ಜನರಲ್ಲಿ ವಿಶೇಷ ವ್ಯಾಮೋಹವುಂಟಾಯಿತು. ನಮ್ಮ ಭಾಷೆಗಳೇ ನಮಗೆ ನಿರುಪಯುಕ್ತವೆನಿಸಿದವು. ಎಲ್ಲ ಕ್ಷೇತ್ರಗಳಲ್ಲಿ ಇಂಗ್ಲಿಷ್ ಭಾಷೆಯ ಹಿಡಿತ, ನಮ್ಮವರ ದಾಸ್ಯ ಮುಂದುವರಿಯಿತು.

ಇಂಗ್ಲಿಷಿನ ಅವಲಂಬನೆ ಹೆಚ್ಚಿದಂತೆ, ಶಿಕ್ಷಣದಲ್ಲಿ ಅದರ ಪ್ರಾಮುಖ್ಯತೆಯೂ ಹೆಚ್ಚಿತು. ಬಾಲ್ಯದಲ್ಲಿಯೇ ಇಂಗ್ಲಿಷ್ ಭಾಷೆಯನ್ನು ಕಲಿಸಿದರೆ ಚೆನ್ನಾಗಿ ತಿಳಿಯುತ್ತದೆ — ಎಂಬ ನಂಬಿಕೆಯಿಂದ ಇಂಗ್ಲಿಷ್ ಮಾಧ್ಯಮ ಶಾಲೆಗಳು ತಲೆಯೆತ್ತಿದವು. ಅವುಗಳ ಸುಸಜ್ಜಿತ ಕ್ರೀಡೋಪಕರಣಗಳು, ಸಮವಸ್ತ್ರ ಇತ್ಯಾದಿಗಳಿಂದ ಕನ್ನಡ ಮಾಧ್ಯಮ ಶಾಲೆಗಳಿಗಿಂತ ಅವುಗಳೇ ಶ್ರೇಷ್ಠ — ಎಂಬ ಭಾವನೆ ಜನರಲ್ಲಿ ಉಂಟಾಯಿತು. ಇಂಗ್ಲಿಷ್ ತಮ್ಮ ಮಾತೃಭಾಷೆ — ಎಂದು ಹೊಸ ಹೊಸ ಶಾಲೆಗಳಿಗೆ ಅನುಮತಿ ಕೇಳಿ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವ ಹಾಗೂ 'ಡೊನೇಷನ್' ಗಳ ಮೂಲಕ ವಿದ್ಯೆಯನ್ನು ವ್ಯಾಪಾರವಾಗಿಸುವ ಭಾಷಾ ಅಲ್ಪಸಂಖ್ಯಾತರ ಹಾಗೂ ಇಂಗ್ಲಿಷ್ ವ್ಯಾಮೋಹಿಗಳ ವಿರುದ್ಧ ಸರಕಾರ ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಸರಕಾರವನ್ನು ನಡೆಸುವ ಅಧಿಕಾರಿಗಳೇ ಇಂಗ್ಲಿಷ್ ಪರವಾಗಿದ್ದುದು, ಸರಕಾರವು ಪ್ರಾದೇಶಿಕ ಭಾಷೆಗಳ ಪರವಾಗಿ ಕೈಗೊಳ್ಳುವ ಯಾವ ನಿರ್ಧಾರವನ್ನೂ ಜಾರಿಗೆ ತರುವಲ್ಲಿ ವಿಫಲವಾಗಲು ಕಾರಣವಾಯಿತು.

ಅಸಮರ್ಪಕ ಶಿಕ್ಷಣ, ಜನರನ್ನು ತಲುಪದ ಸರಕಾರದ 'ಸುಧಾರಣೆ' ಗಳು, ಅನ್ಯ ಭಾಷೆಯ ಆಡಳಿತದಿಂದ ಉಂಟಾದ ಶೋಷಣೆಯ ವಿವಿಧ ಮುಖಗಳ ಸೃಷ್ಟಿ, ಪ್ರಜಾಪ್ರಭುತ್ವವನ್ನೇ ಅಪಹಾಸ್ಯ ಮಾಡುವಂತಹ ಜೀವನವ್ಯವಸ್ಥೆ — ಹೀಗೆ ಇಂಗ್ಲಿಷ್ ದಾಸ್ಯದ ಪರಿಣಾಮ ಕಾಣಿಸಿಕೊಂಡಿದೆ. ಸ್ವಾತಂತ್ರ್ಯವೇನೋ ನಮಗೆ ದೊರಕಿತು; ಆದರೆ ಅದರ ನಿಜವಾದ ಅರ್ಥದಲ್ಲಿ ಅಲ್ಲ.

ಭಾಷಾ ಸಮಸ್ಯೆಗಳನ್ನು ಪರಿಹರಿಸುವಲ್ಲಿ ದೂರಗಾಮಿಯಾದ ಯೋಜನೆಗಳನ್ನು ಹಾಕಿಕೊಳ್ಳದೆ ಭಾಷಾಭಿವೃದ್ಧಿ, ದೇಶಾಭಿವೃದ್ಧಿ — ಎಲ್ಲವೂ ಕೇವಲ ಹೇಳಿಕೆಗಳಾಗಿ

ಊಹಿಸಬಹುದು. ಸ್ವಾತಂತ್ರ್ಯ ದೊರಕಿದಂದಿನಿಂದ ಇಂದಿನವರೆಗೆ ಈ ಯೋಜನೆಗಳ ಕುರಿತು ಕನ್ನಡಿಗರಲ್ಲಿ ನಡೆದ ಚಿಂತನೆಯನ್ನು ಪರಿಶೀಲಿಸುವುದು ಇಲ್ಲಿ ಉಪಯುಕ್ತವಾಗಬಲ್ಲುದು ಅನ್ನಿಸುತ್ತದೆ.

## ಟಿಪ್ಪಣಿಗಳು

1. English in Indian Bilingualism, p.17.
2. ಭಾರತದ ಗ್ಯಾಸೆಟಿಯರ್ — ಸಂಪುಟ 2, ಪು.393–396
3. ಅದೇ., ಪು.723
4. ಅದೇ, ಪು.724
5. English in Indian Bilingualism, p. 17.
6. ಹೊಸಗನ್ನಡದ ಅರುಣೋದಯ, ಪು.67
7. ಭಾರತದ ಗ್ಯಾಸೆಟಿಯರ್ — ಸಂಪುಟ 2, ಪು.724
8. English in Indian Bilingualism, p.19
9. Ibid, p.19
10. " English was a safe, neutral choice in multilingual and multidialectal regions; and there was a perceived lack of registers, meterials, and teachers in the local languages "
    —English in Indian Bilingualism, p.20
11. ಕನ್ನಡ ಅಧ್ಯಯನ, ಪು.141
12. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ — ಭಾಗ 1, ಪು.257–280
13. ಹೊಸಗನ್ನಡದ ಅರುಣೋದಯ, ಪು.67
14. ಅದೇ., ಪು.71
15. ಅದೇ., ಪು.72–81
16. ಆಂಗ್ಲರ ಆಡಳಿತದಲ್ಲಿ ಕನ್ನಡ, ಪು.7
17. ಕರ್ನಾಟಕ ಏಕೀಕರಣದ ಕಥೆ, ಪು.14
18. ಆಂಗ್ಲರ ಆಡಳಿತದಲ್ಲಿ ಕನ್ನಡ, ಪು.97
19. ಕರ್ನಾಟಕ ಏಕೀಕರಣ ಕಥೆ, ಪು.15
20. ನನ್ನ ಜೀವನ ಸ್ಮೃತಿಗಳು, ಪು.85 ಮತ್ತು 115–125
21. ಅದೇ., ಪು.111–115
22. ಕರ್ನಾಟಕ ಏಕೀಕರಣದ ಕಥೆ, ಪು.74
23. ಅದೇ., ಪು.93 ರಲ್ಲಿ ಉದ್ಧೃತ

ಅಧ್ಯಾಯ 4 :

## ಇಂಗ್ಲಿಷ್ – ಕನ್ನಡ ಸಂಬಂಧ ಕುರಿತ ಚಿಂತನೆಗಳು – 1
### ( ಸ್ವಾತಂತ್ರ್ಯಪೂರ್ವ)

1947 ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಗುವ ಮೊದಲು ಕನ್ನಡ ಚಿಂತಕರಲ್ಲಿ ನಡೆದ ಇಂಗ್ಲೀಷ್ – ಕನ್ನಡ ಸಂಬಂಧದ ಕುರಿತ ಚಿಂತನೆಗಳನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ. ಭಾಷಾಸಮಸ್ಯೆಗಳಲ್ಲಿ ಉಂಟಾದ ಎಲ್ಲ ಬೆಳವಣಿಗೆಗಳಿಗೂ ಭಾರತದ ಸ್ವಾತಂತ್ರ್ಯ ಹಾಗೂ ಅದರ ಜೊತೆಯಲ್ಲಿ ನಡೆದ ರಾಜಕೀಯ ಚಟುವಟಿಕೆಗಳು ನೇರ ಕಾರಣವಾಗಿರುವುದರಿಂದ, 1947 ನೇ ವರ್ಷವನ್ನು ಒಂದು ಪ್ರಧಾನ ಘಟ್ಟವಾಗಿ ಪರಿಗಣಿಸುವುದು ಹೆಚ್ಚು ಸೂಕ್ತ.

20ನೇ ಶತಮಾನದ ಆರಂಭದ ಹೊತ್ತಿಗೆ ಕರ್ನಾಟಕದಲ್ಲೆಲ್ಲ ಆಡಳಿತ, ಶಿಕ್ಷಣಗಳಲ್ಲಿ ಇಂಗ್ಲಿಷ್ ವ್ಯಾಪಕವಾಗುತ್ತಿದ್ದಂತೆ, ಕನ್ನಡ ಭಾಷೆ ಶೈಕ್ಷಣಿಕವಾಗಿಯೂ ಸಾಮಾಜಿಕ ವಾಗಿಯೂ ಕ್ಷೀಣಿಸತೊಡಗಿತು. ಮತ್ತೆ ಅದಕ್ಕೆ ಹೊಸ ಚೇತನವುಂಟಾದುದು ಇಂಗ್ಲಿಷ್ ಶಿಕ್ಷಣ ಪಡೆದವರ ಚಿಂತನೆ ಹಾಗೂ ಚಳವಳಿಗಳಿಂದಲೇ – ಎಂಬುದು ಬಹಳ ಮುಖ್ಯವಾದ ಸಂಗತಿ. ತೀರ ಸಂಪ್ರದಾಯವಾದಿ ನಿಲುವು, ಆ ಹೊತ್ತಿಗಾಗಲೇ ಪ್ರವೇಶಿಸಿದ್ದ ಆಧುನಿಕ ವಿಚಾರ ಹಾಗೂ ನಾಗರಿಕತೆಗಳನ್ನು ಎದುರಿಸಲಾಗದೆ ಹೋಯಿತು. ಅಂತೆಯೇ, ಅತ್ಯಂತ ನಾಗರಿಕರೆನ್ನಿಸುವ, ಇಂಗ್ಲಿಷರ ನೀತಿಗಳನ್ನು ಅನುಸರಿಸುವ ಮನೋಭಾವವೂ ಇಲ್ಲಿಗೆ ಹೊಂದಿಕೊಳ್ಳಲಿಲ್ಲ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಕನ್ನಡವನ್ನು ಉಳಿಸು ವುದು ಮತ್ತು ಇಂಗ್ಲಿಷಿನ ಸಂಪರ್ಕ, ಪ್ರಭಾವವನ್ನು ಸ್ವೀಕರಿಸುವುದು – ಈ ಎರಡು ಅನಿವಾರ್ಯತೆಗಳು ಮುಖಾಮುಖಿಯಾದವು. ಆಗಿನ ಚಿಂತಕರ ಮನೋಭಾವ ಹಳೆಯ–ಹೊಸದರ ಸಮನ್ವಯವಾಗಿದ್ದಂತೆ ಕನ್ನಡ–ಇಂಗ್ಲಿಷ್ ಭಾಷೆಗಳ ಸಮನ್ವಯವೂ ಆಗಿ ರೂಪುಗೊಳ್ಳತೊಡಗಿತು. ಕನ್ನಡದ ಬೆಳವಣಿಗೆಗಾಗಿ ಯತ್ನಿಸಿದವರಲ್ಲೆಲ್ಲ ಈ ಬಗೆಯ ಚಿಂತನೆಯನ್ನು ಗಮನಿಸಬಹುದು.

ಇಂಗ್ಲಿಷ್ ಕಲಿತವರೇ ಹೆಚ್ಚಾಗಿ ಕನ್ನಡದ ಬೆಳವಣಿಗೆಯ ಕುರಿತು ಚಿಂತಿಸಿದ್ದರಿಂದ ಇಂಗ್ಲಿಷ್ – ಕನ್ನಡ ಸಂಬಧಧ ಕುರಿತ ಅವರ ಚಿಂತನೆಗಳಲ್ಲಿ ಒಂದು ಕ್ರಮವನ್ನು ನಾವು ಗುರುತಿಸಬಹುದು :

1) ಎರಡು ಭಾಷೆಗಳು, ವಿಚಾರಗಳು, ಸಂಸ್ಕೃತಿಗಳು ಮುಖಾಮುಖಿ ಯಾದಾಗ ಯಾವುದೊಂದರ ಕಡೆಗೆ ವಾಲುವುದಕ್ಕಿಂತ ಹೊಸ ಬಗೆಯ ಸೃಷ್ಟಿಯೊಂದನ್ನು ಬಯಸುವುದು.

2) ಆ ಸೃಷ್ಟಿ ಹೇಗೆ ಸಾಧ್ಯ, ಅದಕ್ಕೆ ಯಾವ ವಿಧಾನ ಸೂಕ್ತ ಎಂಬುದರ ಕುರಿತು ಯೋಜನೆ ಹಾಕಿಕೊಳ್ಳುವುದು.

ದಿಂದ ಕೂಡಿದ
3) ಅಭಿಮಾನ ಅಥವಾ ನಿರಭಿಮಾನ್ನ ಅಭಿಪ್ರಾಯಗಳಿಗೆ ಬದಲಾಗಿ ವಸ್ತುಸ್ಥಿತಿಯ ಆಧಾರದಲ್ಲಿ ಕಾರ್ಯಪ್ರವೃತ್ತರಾಗುವುದು.

ಸ್ವಾತಂತ್ರ್ಯ ಪೂರ್ವದಲ್ಲಿ ನಡೆದ ಭಾಷಾ ಚಿಂತನೆಯಲ್ಲಿ ಈ ಮೂರು ಅಂಶ ಗಳನ್ನು ಹೆಚ್ಚು ಕಡಿಮೆ ಎಲ್ಲ ಚಿಂತಕರಲ್ಲಿ ಗುರುತಿಸಬಹುದು. ಸ್ವಾತಂತ್ರ್ಯಾನಂತರ ತಲೆಯೆತ್ತಿದ ಕೇಂದ್ರ – ರಾಜ್ಯಗಳ ನಡುವಿನ ಸಂಪರ್ಕ ಸಮಸ್ಯೆ, ಶಿಕ್ಷಣದಲ್ಲಿ ಭಾಷಾನೀತಿ, ಆಡಳಿತ ಭಾಷೆಯ ಆಯ್ಕೆ – ಮೊದಲಾದ ಸಮಸ್ಯೆಗಳು ಈ ಹಂತದಲ್ಲಿ ಇನ್ನೂ ಬೀಜರೂಪದಲ್ಲಿದ್ದುದನ್ನು ನಾವು ಕಾಣಬಹುದು.

ಸ್ವಾತಂತ್ರ್ಯಕ್ಕೆ ಮೊದಲು ಇಂಗ್ಲಿಷ್–ಕನ್ನಡ ಸಂಬಂಧದ ಕುರಿತು ಚಿಂತಿಸಿದವರಲ್ಲಿ ಬಿ.ಎಂ.ಶ್ರೀ., ದಿವಾಕರ ರಂಗರಾಯರು (ರಂ.ರಾ.ದಿವಾಕರ), ಮುದವೀಡು ಕೃಷ್ಣರಾಯರು, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಿ.ವಿ.ಜಿ., ಎ.ಆರ್.ಕೃಷ್ಣ ಶಾಸ್ತ್ರೀ – ಇವರು ಪ್ರಮುಖರು. ಇವರು ಹಾಗೂ ಇನ್ನುಳಿದ ಚಿಂತಕರಲ್ಲಿ ಕಂಡು ಬರುವ ಸಮಾನ ಅಭಿಪ್ರಾಯಗಳನ್ನೂ, ಅವುಗಳ ನಡುವಿನ ಹೋಲಿಕೆ ಹಾಗೂ ವ್ಯತ್ಯಾಸ ಗಳನ್ನೂ ಗುರುತಿಸಿ ವಿಶ್ಲೇಷಿಸುವ ಪ್ರಯತ್ನವಿಲ್ಲಿ ಮಾಡಲಾಗಿದೆ.

ಸ್ವಾತಂತ್ರ್ಯಕ್ಕೆ ಮೊದಲಿನ ಬರವಣಿಗೆಗಳಿಂದ, ಕನ್ನಡಿಗರಲ್ಲಿ ಇಂಗ್ಲಿಷಿನ ಕುರಿತು ಮೂರು ಬಗೆಯ ನಿಲುವುಗಳು ರೂಪುಗೊಂಡಿದ್ದಂತೆ ತಿಳಿದು ಬರುತ್ತದೆ.[1] 1)ಇಂಗ್ಲಿಷ್ ಪರಕೀಯ ಭಾಷೆ, ಅದು ನಮ್ಮ ಭಾಷೆಯಾಗದು; ಅದರಿಂದ ಹಾನಿಯೇ ಹೆಚ್ಚು; ಆದ್ದರಿಂದ ಅದನ್ನು ಸಂಪೂರ್ಣ ಬಿಡತಕ್ಕದ್ದು ಎಂಬ ತರ್ಕ. 2) ಕನ್ನಡ ಬೆಳೆಯದ ಭಾಷೆ; ಇಂಗ್ಲಿಷ್ ಭಾಷೆಯೇ ಸಮೃದ್ಧ, ಆಧುನಿಕ ಹಾಗೂ ಉಪಯುಕ್ತ; ದೇಶದ

ಏಕತೆ, ಪಾಶ್ಚಾತ್ಯ ಸಂಪರ್ಕ ಮೊದಲಾದ ಅನೇಕ ಲಾಭಗಳಿವೆ; ಆದ್ದರಿಂದ ಅದನ್ನೇ ಎಲ್ಲರೂ ಸ್ವೀಕರಿಸಿ, ದೇಶಭಾಷೆಗಳನ್ನು (ಪ್ರಾದೇಶಿಕ ಭಾಷೆ) ವರ್ಜಿಸಬೇಕು.
3) ಇಂಗ್ಲಿಷನ್ನು ಕಲಿಯುವುದೂ ಕನ್ನಡವನ್ನು ಬೆಳೆಸುವುದೂ ತೀರ ಅನಿವಾರ್ಯ; ಆದ್ದರಿಂದ ಎರಡನ್ನೂ ಬಿಡುವಂತಿಲ್ಲ. ಎರಡನ್ನೂ ಕಲಿತು ಕನ್ನಡವನ್ನು ಬೆಳೆಸಬೇಕು; ಹಳೆಯ–ಹೊಸದರ ಸಮನ್ವಯವಾಗಬೇಕು.

ಈ ಮೂರು ಮುಖ್ಯವಾದ ನಿಲುವುಗಳಲ್ಲಿ ಮೊದಲ ಎರಡು ನಿಲುವುಗಳಿಗೆ ಕಾರಣ ಹಾಗೂ, ಅವುಗಳು ಹೇಳುವ ಕಾರ್ಯವಿಧಾನ ತುಂಬ ಸ್ಪಷ್ಟವಾಗಿದ್ದುದರಿಂದ ಅವುಗಳಿಗೆ ಹೆಚ್ಚು ವಿವರಣೆ, ವಿಚಾರ–ವಿಮರ್ಶೆ, ಯೋಜನೆಗಳು ಅನವಶ್ಯಕವಾಗಿತ್ತು. ಆದ್ದರಿಂದ ಆ ನಿಲುವಿನ ಬರಹಗಳು ಬಹಳ ಕಡಿಮೆ. ಕೊನೆಯ ನಿಲುವಿನಲ್ಲಿ ಇಂಗ್ಲಿಷ್–ಕನ್ನಡಗಳ ನಡುವಿನ ಸಂಬಂಧ ಹೇಗಿರಬೇಕು, ಎಷ್ಟರಮಟ್ಟಿಗೆ ಇರಬೇಕು, ಯಾವ ರೀತಿ ಇರಬೇಕು, ಅದರಿಂದ ಏನೇನಾಗಬಹುದು — ಎಂದು ಹಲವು ರೀತಿ ಚಿಂತಿಸುವ ಸಾಧ್ಯತೆಗಳಿದ್ದುದರಿಂದ, ಅದು ಅನಿವಾರ್ಯವೂ ಆಗಿತ್ತು. ಹಾಗಾಗಿ ಈ ಬಗೆಯ ಬರವಣಿಗೆಗಳೇ ಅತ್ಯಂತ ಹೆಚ್ಚು ಸಿಗುತ್ತವೆ. ಭಾಷಾಸಂಬಂಧದ ಕುರಿತು ಚಿಂತಿಸುವಾಗ ಅವುಗಳೇ ಮುಖ್ಯವಾಗುತ್ತವೆ.

ಭಾಷಾಸಮಸ್ಯೆಗಳು ಮತ್ತು ಇಂಗ್ಲಿಷ್–ಕನ್ನಡ ಸಂಬಂಧದ ಕುರಿತು ಕ್ರಿ.ಶ. ಸುಮಾರು 1900 ರಿಂದ 1947ರ ವರೆಗೆ ನಡೆದ ಚಿಂತನೆಗಳಲ್ಲಿ ಕೆಲವು ಸಮಾನ ಅಂಶಗಳನ್ನು ಗುರುತಿಸಿ ಅಧ್ಯಯನ ಮಾಡುವುದು ಸೂಕ್ತವೆನಿಸುತ್ತದೆ. ಆ ಅಂಶಗಳು ಮುಖ್ಯವಾಗಿ ಏಳು :

1) ಅಂತರ ಪ್ರಾಂತೀಯ, ಅಂತರ ರಾಷ್ಟ್ರೀಯ ವ್ಯವಹಾರಕ್ಕಾಗಿ ಇಂಗ್ಲಿಷ್
2) ಕನ್ನಡಾಭಿಮಾನ
3) ಇಂಗ್ಲಿಷ್ ಕುರಿತ ಭ್ರಾಂತಿಯ ಬಗ್ಗೆ
4) ಇಂಗ್ಲಿಷಿನಿಂದಾಗುವ ತೊಂದರೆಗಳು
5) ಕನ್ನಡದ ಬೆಳವಣಿಗೆ
6) ಹಿಂದೀ ಸಮಸ್ಯೆ
7) ಭಾಷೆಗಳ ಸ್ಥಾನಮಾನ

ಕನ್ನಡದ ಹೆಚ್ಚಿನ ಚಿಂತಕರಲ್ಲಿ ಈ ಏಳು ವಿಷಯಗಳು ಹಲವು ಬಗೆಗಳಲ್ಲಿ ಬಂದಿವೆ. ಕೆಲವರಲ್ಲಿ ಕೆಲವು ವಿಷಯಗಳು ಬಂದಿಲ್ಲ; ಕೆಲವರಲ್ಲಿ ಇವುಗಳಿಗಿಂತ ಹೆಚ್ಚು ವಿಷಯಗಳೂ ಬಂದಿವೆ. ಆದರೆ ಎಲ್ಲರ **ಒಟ್ಟು** ಚಿಂತನೆ ಮುಖ್ಯವಾಗಿ ಈ ಏಳು ಅಂಶಗಳ ಸುತ್ತ ಸುತ್ತುತ್ತಿವೆ — ಎಂಬುದು ಮುಖ್ಯ. ಈ ಅಂಶಗಳನ್ನು ಈಗ ವಿವರವಾಗಿ ಗಮನಿಸಬಹುದು.

## 1. ಅಂತರ ಪ್ರಾಂತೀಯ, ಅಂತರರಾಷ್ಟ್ರೀಯ ವ್ಯವಹಾರಕ್ಕಾಗಿ ಇಂಗ್ಲಿಷ್

ರಾಷ್ಟ್ರೀಯ, ಅಂತರರಾಷ್ಟ್ರೀಯ ವ್ಯವಹಾರಗಳಿಗೆ ಇಂಗ್ಲಿಷ್ ಅವಶ್ಯಕ; ಆದರೆ ಎಲ್ಲರೂ ಇಂಗ್ಲಿಷ್ ಕಲಿಯಬೇಕಾಗಿಲ್ಲ, ಕೆಲವರು ಕಲಿತರೆ ಸಾಕು — ಎಂಬ ಅಭಿಪ್ರಾಯ ಈ ಶತಮಾನದ ಆರಂಭದ ಮೊದಲ ಚಿಂತಕರಲ್ಲಿ ಕಂಡುಬರುತ್ತದೆ. ಜನಸಾಮಾನ್ಯರೆಲ್ಲರಿಗೂ ವಿದ್ಯಾಭ್ಯಾಸ ನೀಡಬೇಕು, ಜನರ ಜೀವನ ಕನ್ನಡದ ಮೂಲಕವೇ ಉತ್ತಮಗೊಳ್ಳಬಹುದು — ಎಂಬ ಎಚ್ಚರವು 'ಇಂಗ್ಲಿಷ್ ಕೆಲವರಿಗೆ ಮಾತ್ರ ಸಾಕು, ದೇಶಭಾಷೆ ಎಲ್ಲರಿಗೂ ಬೇಕು' ಎಂಬ ನಿಲುವಿಗೆ ಕಾರಣವಾಯಿತು. 1911 ರಲ್ಲಿ ಬಿ.ಎಂ.ಶ್ರೀಯವರು 'ಕನ್ನಡ ಮಾತು ತಲೆ ಎತ್ತುವ ಬಗೆ' ಎಂಬ ಭಾಷಣದಲ್ಲಿ, 'ಮೂವತ್ತು ಕೋಟಿ ಜನರಲ್ಲಿ ಒಂದು ಪಿಳ್ಳೆಯೂ ಬಿಡದ ಹಾಗೆ ಇಂಗ್ಲಿಷ್ ಮಾತನ್ನು ಆಡುವುದು ಸಾಧ್ಯವೇ ಯೋಚಿಸಿ' ಎಂದು ಪ್ರಶ್ನಿಸಿದ್ದಾರೆ.[2]

''ಅಭಿಮಾನದಿಂದ ದೇಶಭಾಷೆಗಳನ್ನು ಉದ್ಧಾರಮಾಡಿ ಆಯಾ ಪ್ರಾಂತ್ಯಗಳ ಜನಸಾಮಾನ್ಯರಿಗೂ, ಅನುಕೂಲಕ್ಕೆ ಇಂಗ್ಲಿಷ್ ಭಾಷೆಯನ್ನೂ ಸ್ವೀಕರಿಸಿ ಒಗ್ಗಟ್ಟಿಗಾಗಿ ಒದ್ದಾಡುವ ಇಂಡಿಯದ ವಿದ್ಯಾವಂತರಿಗೂ, ಇಬ್ಬರಿಗೂ ಲಾಭವಾಗುವಂತೆ ನಡೆಯತಕ್ಕದ್ದೇ ಮೇಲು'' [3] ಎನ್ನುತ್ತಾ, ರಾಷ್ಟ್ರೀಯ ಏಕತೆಗೆ ಒಂದೇ ಭಾಷೆಯಿರಬೇಕಾಗಿಲ್ಲವೆಂದೂ 'ಶ್ರೀ' ಯವರು ಹೇಳುತ್ತಾರೆ.

ಎಚ್.ವಿ. ನಂಜುಂಡಯ್ಯನವರು ಇಂಗ್ಲಿಷ್ ಭಾಷೆಯ ಅಗತ್ಯವನ್ನು ಬೇರೆ ರೀತಿಯಲ್ಲಿ ಹೇಳುತ್ತಾರೆ : ''ಈ ಕಾಲದಲ್ಲಿ ಎಲ್ಲೆಲ್ಲಿಯೂ ಮಹತ್ತರವಾಗಿ ನಡೆಯುತ್ತಿರುವ ಅರ್ಥಸಾಧಕ ವ್ಯಾಪಾರ ವಿಷಯಕವಾದ ಹೋರಾಟದಲ್ಲಿ ನಮ್ಮ ಯೋಗಕ್ಷೇಮ

ವನ್ನು ಕಾಪಾಡಿಕೊಳ್ಳುವಷ್ಟು ಯೋಗ್ಯತೆಯನ್ನು ಪಡೆದುಕೊಳ್ಳುವುದಕ್ಕೂ ಒಂದು ಅನ್ಯದೇಶ ಭಾಷೆಯನ್ನು ನಾವು ಕಲಿಯಲೇ ಬೇಕಾಗಿರುವದರಿಂದ ಇಂಗ್ಲಿಷ್ ಭಾಷೆಯಲ್ಲಿ ಪ್ರವೀಣತೆಯನ್ನು ಪಡೆಯಬಲ್ಲ ಎಲ್ಲಿಯೋ ಕೆಲವರ ಪ್ರಯತ್ನಗಳಿಂದ ವಿಶೇಷ ಫಲ ವನ್ನು ಪಡೆಯಲಾಗುವುದೆಂದು ಎಣಿಸುವುದು ವ್ಯರ್ಥ. ಯಾವ ದೇಶದಲ್ಲಿಯೇ ಆಗಲಿ ಪಾಂಡಿತ್ಯದ ವಿಷಯದಲ್ಲಿಯೂ ಶಾಸ್ತ್ರೀಯ ಪರಿಶೋಧನಗಳ ವಿಷಯದಲ್ಲಿಯೂ ಪಾರಂಗತರೆನ್ನಿಸಿಕೊಳ್ಳುವವರು ಯಾವಾಗಲೂ ಬಹಳ ಸ್ವಲ್ಪವೇ ಇರುವರು; ಇಂತಹ ಪಂಡಿತೋತ್ತಮರ ಪಾಂಡಿತ್ಯದ ಫಲವನ್ನು ಕಾಲಾನುಕಾಲದಲ್ಲಿ ನಾಗರಿಕ ಪ್ರಪಂಚವೆಲ್ಲಾ ಅನುಭವಿಸುವುದು'' [4] ಇಂಗ್ಲಿಷ್ ಕೆಲವರಿಗೆ ಮಾತ್ರ ಅಗತ್ಯ ಎಂಬುದನ್ನು ಇವರೂ ಹೇಳುತ್ತಾರೆ.

ಭಾರತಕ್ಕೆ ವಿವಿಧ ಪ್ರಾಂತಗಳು ಕಲೆತು ಕೆಲಸ ಮಾಡಲು ಸಾಮಾನ್ಯ ಭಾಷೆಯೊಂದು ಅಗತ್ಯ [5] — ಎನ್ನುವ ಕೆ.ಪಿ.ಪುಟ್ಟಣ್ಣಶೆಟ್ಟರು, ''ಅದು ಈಗ ಇಂಗ್ಲಿಷ್ ಭಾಷೆಯಾಗಿರುವುದು'' [6] ಎನ್ನುತ್ತಾರೆ. ಇಂಗ್ಲಿಷ್ ಎಲ್ಲರಿಗೂ ಬೇಕಾಗಿಲ್ಲ ಎಂಬ ಅಭಿಪ್ರಾಯವನ್ನು ಇವರೂ ವ್ಯಕ್ತಪಡಿಸುತ್ತಾರೆ.

ಮಾಸ್ತಿಯವರು, ''ನಮಗೆ ಇಂಗ್ಲೀಷ್ ಇರಲಿ; ಆದರೆ ನಮ್ಮ ದೇಶದ ಇತರ ಪ್ರಾಂತದ ಜನರೊಂದಿಗೆ, ಪ್ರಪಂಚದ ಇತರ ದೇಶಗಳ ಜನರೊಂದಿಗೆ ಬಳಕೆಗಾಗಿ ಮಾತ್ರ ಅದನ್ನು ಉಪಯೋಗಿಸೋಣ'' ಎನ್ನುತ್ತಾರೆ.[7]

ಎನ್.ಎಸ್. ಸುಬ್ಬರಾಯರು ರಾಷ್ಟ್ರೀಯ ಏಕತೆ ಹಾಗೂ ಪರಸ್ಪರ ಸಂಪರ್ಕಕ್ಕೆ ಇಂಗ್ಲಿಷ್ ಇರಬೇಕೆಂದೂ, ''ಹಿಂದುಸ್ಥಾನದಿಂದ ಹೊರಗಿರುವವರೊಂದಿಗೆ ಸಂಸ್ಕೃತಿ ಸಂಬಂಧವನ್ನು ಬೆಳೆಸಲು ಅದು ಸಹಾಯಕವಾಗಿದೆ'' ಎಂದೂ ಹೇಳುತ್ತಾರೆ.[8] ''ಆದರೆ ಆ ಭಾಷೆ ಹೆಚ್ಚು ಜನರಲ್ಲಿ ಪ್ರಚಾರವಾಗುವುದೆ ಎಂದು ಸಂದೇಹವಾಗಿದೆ'' ಎಂದೂ ಹೇಳುತ್ತಾರೆ.[9]

ಇಂಗ್ಲಿಷ್-ಕನ್ನಡ ಸಂಬಂಧದ ಕುರಿತು ಚಿಂತಿಸುವಾಗ ಆರಂಭದ ಚಿಂತಕರು ರಾಷ್ಟ್ರೀಯ,

ಅಂತರರಾಷ್ಟ್ರೀಯ ಸಂಪರ್ಕ ವ್ಯವಹಾರ ವಿಷಯವನ್ನು ತೆಗೆದುಕೊಂಡದ್ದು ಕೆಲವು ಕಾರಣಗಳಿಂದ ಮುಖ್ಯವಾಗುತ್ತದೆ.

ಕರ್ನಾಟಕದಲ್ಲಿ ಬ್ರಿಟಿಷರ ಸಾರ್ವಭೌಮತ್ವವನ್ನೊಪ್ಪಿಕೊಂಡು ಆಡಳಿತ ನಡೆಸುತ್ತಿದ್ದ ಸಂಸ್ಥಾನಗಳಲ್ಲಿ ಸರಕಾರೀ ಉದ್ಯೋಗಗಳಲ್ಲಿದ್ದ ಇಂಗ್ಲಿಷ್ ಶಿಕ್ಷಿತರು ಇಂಗ್ಲಿಷ್ ಬಗ್ಗೆ ಸ್ವೀಕಾರ ಮನೋಭಾವ ತಾಳಿದ್ದರು. ರಾಷ್ಟ್ರೀಯ, ಅಂತರರಾಷ್ಟ್ರೀಯ ಸಂಪರ್ಕದ ಅವಶ್ಯಕತೆಯನ್ನು ಅವರು ಕಂಡುಕೊಂಡಿದ್ದುದಕ್ಕೂ, ಬ್ರಿಟಿಷರ ವಿರುದ್ಧ ಚಳವಳಿಯಲ್ಲಿ ತೊಡಗಿದ್ದ ಹೋರಾಟಗಾರರು ಕಂಡುಕೊಂಡಿದ್ದುದಕ್ಕೂ ವ್ಯತ್ಯಾಸವಿದೆ. ಮೊದಲನವರಿಗೆ ಸಂಪರ್ಕ ಮುಖ್ಯವಾಗಿತ್ತು, ಇಂಗ್ಲಿಷ್ ಕೂಡ ಮುಖ್ಯವಾಗಿತ್ತು; ಎರಡನೆಯವರಿಗೆ ಸಂಪರ್ಕ ಅವರಿಗಿಂತಲೂ ಮುಖ್ಯವಾಗಿತ್ತು, ಆದರೆ ಇಂಗ್ಲಿಷ್ ಅಷ್ಟೇ ಅಮುಖ್ಯವಾಗಿತ್ತು — ಆದರೆ ಅನಿವಾರ್ಯವಾಗಿತ್ತು. ಇಂಗ್ಲಿಷ್—ಕನ್ನಡ ಸಂಬಂಧದ ಕುರಿತು ಹೇಳುವಾಗ ಮೊದಲನೆಯವರು ಹೆಚ್ಚಾಗಿ ಇಂಗ್ಲೀಷೇ ಸಂಪರ್ಕ ಭಾಷೆಯಾಗಬೇಕು ಎನ್ನುತ್ತಾರೆ; ಎರಡನೆಯವರು ಸಂಪರ್ಕ ಭಾಷೆಯೊಂದು ಅಗತ್ಯವೆನ್ನುತ್ತಾರೆ — ಆದರೆ ಅದು ಇಂಗ್ಲಿಷ್ ಆಗಿರಬೇಕು ಎಂಬುದಕ್ಕೆ ಅಷ್ಟು ಒತ್ತು ನೀಡುವುದಿಲ್ಲ.



ರಾಷ್ಟ್ರೀಯತೆಯಲ್ಲಿ ಹಿಂದಿ ಭಾಷೆ ಸೇರಿಕೊಳ್ಳುತ್ತಿದ್ದಂತೆ ಎರಡು ಅಭಿಪ್ರಾಯಗಳು ಕಾಣಿಸಿಕೊಂಡಿದ್ದವು. ಒಂದು, ರಾಷ್ಟ್ರೀಯ ಏಕತೆಗೆ ಒಂದೇ ಭಾಷೆ ಇರಬೇಕೆಂದೇನೂ ಇಲ್ಲ — ಎಂದು. ಮೊದಲನೆಯ ಅಭಿಪ್ರಾಯ ಕೆ.ಪಿ.ಪುಟ್ಟಣ್ಣಶೆಟ್ಟರು, ಮಾಸ್ತಿ, ಎನ್.ಎಸ್. ಸುಬ್ಬರಾಯರು, ದಿವಾಕರ ರಂಗರಾಯರು, ಮೊದಲಾದವರದು. ಆಲೂರು ವೆಂಕಟರಾಯರು, ಬಿ.ಎಂ.ಶ್ರೀ., ಮುದವೀಡು ಕೃಷ್ಣರಾಯರು — ಮೊದಲಾದವರು ಎರಡನೇ ಅಭಿಪ್ರಾಯದವರು. ರಾಷ್ಟ್ರೀಯ ಏಕತೆಗೆ ಒಂದು ಭಾಷೆ ಅಗತ್ಯ ಎನ್ನುವವರಲ್ಲಿ ಎನ್.ಎಸ್. ಸುಬ್ಬರಾಯರು ಮತ್ತು ಮಾಸ್ತಿ ಅದು ಇಂಗ್ಲಿಷೇ ಇದ್ದರೆ ಒಳ್ಳೆಯದು ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಇಬ್ಬರೂ, ಅದು ಹಿಂದಿ ಆಗುವ ಬಗ್ಗೆ ವಿರೋಧ ವ್ಯಕ್ತಪಡಿಸುವುದಿಲ್ಲ. ಎನ್.ಎಸ್. ಸುಬ್ಬರಾಯರು, ''ಸಾಮಾಜಿಕ ಜೀವನದ ಇತರ ವಿಷಯಗಳಂತೆ ಇದರಲ್ಲಿಯೂ ಬಹು ಜನರ ನಿರ್ಧಾರದಂತೆಯೇ ತೀರ್ಮಾನವಾಗತಕ್ಕದ್ದು ಸಹಜ''[10] ಎನ್ನುತ್ತಾರೆ. ಇಲ್ಲಿ ಇಂಗ್ಲಿಷ್ ಭಾಷೆ ಒಂದನ್ನೇ ಕಲಿತದ್ದರಿಂದ ಉಂಟಾಗ

ಬಹುದಾದ ಹಲವು ಅನುಕೂಲತೆಗಳನ್ನು ಎನ್.ಎಸ್. ಸುಬ್ಬರಾಯರು ಹೇಳಿದ್ದಾರೆ. 1) ಅಂತರ ರಾಜ್ಯ ವ್ಯವಹಾರ, ಸಂಪರ್ಕ 2) ಅಂತರರಾಷ್ಟ್ರೀಯ ವ್ಯವಹಾರ 3) ಶಿಕ್ಷಣ, ಆಡಳಿತದಲ್ಲಿ ಈಗಾಗಲೇ ಇಂಗ್ಲಿಷ್ ಬಂದಿರುವುದು 4) ಇಂಗ್ಲಿಷಿನ ಜ್ಞಾನದ ಮೂಲಕ ದೊರಕುವ ಐರೋಪ್ಯ ಜ್ಞಾನ. ಮಾಸ್ತಿಯವರು, ''ದೇಶಕ್ಕೆಲ್ಲ ಸಾಮಾನ್ಯ ಭಾಷೆಯೊಂದು ಇರಬೇಕೆಂಬ ಕಾರಣದಿಂದ ರಾಜಕೀಯರು ಹಿಂದೀ ಭಾಷೆಯನ್ನು ಮುಂದಕ್ಕೆ ತರುತ್ತಿದ್ದಾರೆ.... ರಾಜಕೀಯ ದೃಷ್ಟಿಯಿಂದ ಮಾತ್ರ ನೋಡಿದರೆ ಇದಾಗಬಹುದೆಂದು ತೋರಿದರೂ ಇತರ ದೃಷ್ಟಿಯಿಂದ ಇದು ಅಪೇಕ್ಷಣೀಯವೆಂದು ನನ್ನ ಮನಸ್ಸಿಗೆ ತೋರುವುದಿಲ್ಲ.... ಹಿಂದಿಯು ರಾಜಕೀಯ ದೃಷ್ಟಿಯಿಂದ ನಮಗೆ ಉಪಯೋಗವಾಗಬಹುದೇ ಹೊರತು ಕನ್ನಡಕ್ಕೆ ಒಂದು ಹೊಸ ಪ್ರಪಂಚವನ್ನು ತೋರಿಸಲಾರದು; ಒಂದು ಹೊಸ ನಿಯಮವನ್ನು ಕೊಡಲಾರದು. ಆದಕಾರಣ ನಾವು ಇಂಗ್ಲೀಷನ್ನು ಬಿಡುವಂತಿಲ್ಲ'' ಎನ್ನುತ್ತಾರೆ.[11] ಆದರೆ ಮುಂದೆ ಅವರು, ಏಕತೆಗೆ ಒಂದೇ ಭಾಷೆ ಇರಬೇಕಾಗಿಲ್ಲವೆಂದೂ, ಹಿಂದಿಯು ಕೇಂದ್ರದಲ್ಲಿನ ಕಾರ್ಯಕಲಾಪಗಳಿಗೆ ಮಾತ್ರವೇ ಸಾಕೆಂದೂ ಅಭಿಪ್ರಾಯ ಪಡುತ್ತಾರೆ. (ಸ್ವಾತಂತ್ರ್ಯನಂತರ)

ದಿವಾಕರ ರಂಗರಾಯರು ರಾಷ್ಟ್ರಭಾಷೆ ಹಿಂದೀ ಎನ್ನುವುದನ್ನು ಒಪ್ಪುತ್ತಾರೆ; ಆದರೆ ಅದು ಪ್ರಾಂತಭಾಷೆಗೆ ತೊಂದರೆಯಾಗಬಾರದು ಎನ್ನುತ್ತಾರೆ.[12]

ಬಿ.ಎಂ.ಶ್ರೀ. ಮತ್ತು ಮುದವೀಡು ಕೃಷ್ಣರಾಯರು ಭಾಷಾವೈವಿಧ್ಯತೆ ದೇಶದ ಏಕತೆಗೆ ಬಾಧಕವಲ್ಲ — ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಶ್ರೀಯವರು, ''ಒಗ್ಗಟ್ಟಾಗಿ ಒದ್ದಾಡುವ ಇಂಡಿಯದ ವಿದ್ಯಾವಂತರಿಗೆ ಲಾಭವಾಗುವಂತೆ'' ಇಂಗ್ಲಿಷ್ ಭಾಷೆಯನ್ನು ಸ್ವೀಕರಿಸಬೇಕು — ಎನ್ನುತ್ತಾರೆ. ಅವರು ಉದ್ದೇಶಿಸಿರುವುದು ಪ್ರಾಂತ-ಪ್ರಾಂತಗಳೊಳಗಿನ ಸಂಪರ್ಕವನ್ನೇ ಇರಬೇಕು. ಮುದವೀಡು ಕೃಷ್ಣರಾಯರು ಒಂದೇ ಭಾಷೆಯಿಲ್ಲದೆ ಜನಾಂಗದ ರಾಷ್ಟ್ರೀಯತ್ವ ಸಿದ್ಧಿಸಲಾರದು ಎಂಬ ಸಿದ್ಧಾಂತವೇ ತಳಬುಡವಿಲ್ಲದೆಂದೂ, ಅದಕ್ಕೆ ಸ್ವಿಟ್ಸರ್ಲೆಂಡಿನ ಉದಾಹರಣೆಯನ್ನು ಕೊಡುತ್ತಾರೆ.[13]

ಈ ಎರಡು ಬಗೆಯ ಅಭಿಪ್ರಾಯಗಳಲ್ಲಿ (ರಾಷ್ಟ್ರೀಯತ್ವಕ್ಕೆ ಏಕಭಾಷೆ ಅಗತ್ಯ

ಹಾಗೂ ಅನಗತ್ಯ — ಎಂದು.) ಇರುವ ಅಂತರ ಸೂಕ್ಷ್ಮವಾದದ್ದು. ಭಾರತದ ಏಕತೆಗೆ ಒಂದು ಭಾಷೆ ಬೇಕು — ಎನ್ನುವವರು ಉಳಿದ ಭಾಷೆಗಳು ಇರಲೇಬಾರದು — ಎಂಬ ಅಭಿಪ್ರಾಯವನ್ನು ಹೊಂದಿಲ್ಲ. ಸಂಪರ್ಕಕ್ಕೆ, ವ್ಯವಹಾರಕ್ಕೆ ಎಷ್ಟರಮಟ್ಟಿಗೆ ಇಂಗ್ಲಿಷ್ ಬೇಕೋ ಅಷ್ಟು ಸಾಕು; ಉಳಿದಂತೆ ಭಾರತೀಯ ಭಾಷೆಗಳಿಗೇ ಪ್ರಾಧಾನ್ಯತೆ — ಎಂದಿದ್ದಾರೆ. ಹಾಗೆಯೇ, ಭಾಷಾವೈವಿಧ್ಯತೆಯಿಂದ ರಾಷ್ಟ್ರೀಯತೆಗೆ ಧಕ್ಕೆಯಾಗದು ಎನ್ನುವವರು ಪ್ರಾಂತ–ಪ್ರಾಂತಗಳ ನಡುವಿನ ವ್ಯವಹಾರಕ್ಕೆ ಇಂಗ್ಲಿಷ್ ಅಥವಾ ಹಿಂದಿ — ಇವುಗಳ ಅವಲಂಬನೆಯನ್ನು ಅಲ್ಲಗಳೆಯುವುದಿಲ್ಲ. ಏಕತೆಯ ಹೆಸರಿನಿಂದ ಪ್ರಾಂತಭಾಷೆಗಳನ್ನು ಯಾವುದೇ ಭಾಷೆ ಆಕ್ರಮಿಸಬಾರದೆಂದೂ, ಅದರ ಬೆಳವಣಿಗೆಗೆ ಅಡ್ಡಿಯಾಗಬಾರದೆಂದೂ ಇವರೆಲ್ಲ ಸಾಮಾನ್ಯವಾಗಿ ವ್ಯಕ್ತವಾಗುವ ಅಭಿಪ್ರಾಯ. ಅಂತರರಾಜ್ಯ, ಅಂತರರಾಷ್ಟ್ರೀಯ ವ್ಯವಹಾರ ಎಲ್ಲರಿಗೂ ಬೇಕಾಗಿಲ್ಲ; ಆದ್ದರಿಂದ ಕೆಲವರು ಮಾತ್ರ ಇಂಗ್ಲಿಷ್ ಅಥವಾ ಹಿಂದಿಯನ್ನು ಕಲಿತರೆ ಸಾಕು ಎನ್ನುವುದು ಕೂಡ ಹೆಚ್ಚಿನವರ ಅಭಿಪ್ರಾಯ. ವ್ಯತ್ಯಾಸವಿರುವುದು, ಪ್ರಾಂತಭಾಷೆಯ ಅವಶ್ಯಕತೆ ಮತ್ತು ಪ್ರಾಂತಕ್ಕೆ ಹೊರಗಿನವರೊಂದಿಗಿನ ವ್ಯವಹಾರ — ಇವುಗಳಲ್ಲಿ ಯಾವುದಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆ — ಎಂಬುದರಲ್ಲಿ.

ಇವುಗಳಲ್ಲಿ ಯಾವುದಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟಿದ್ದರೂ, ಅವರ ಉದ್ದೇಶ ಕನ್ನಡಾಭಿವೃದ್ಧಿಯೇ ಆಗಿತ್ತು. ಇಂಗ್ಲಿಷ್ ಭಾಷೆಯೊಂದಿಗಿನ ಸಂಬಂಧ ಹೇಗಿರಬೇಕು — ಎನ್ನುವಾಗ ಮೊದಮೊದಲು ಅವರ ದೃಷ್ಟಿ ವಿಶಾಲಭಾವನೆಯಿಂದ ಕೂಡಿತ್ತು. ಕ್ರಮೇಣ 'ಹಿಂದೀ ರಾಷ್ಟ್ರೀಯತೆ' ಬಂದಾಗ ಆ ವಿಶಾಲಭಾವನೆ ಕಡಿಮೆಯಾಗಿ ಇಂಗ್ಲಿಷ್ ವಿರೋಧಿ ಭಾವನೆ ಕಾಣಿಸಿಕೊಂಡಿತು. ಕೊನೆಗೆ, ಕನ್ನಡವೇ ಪ್ರಧಾನವಾಗಿ ಹಿಂದೀ ವಿರೋಧಿ ನಿಲುವು ಕಾಣಿಸಿಕೊಂಡಿತು. ಇವು ಮೂರಕ್ಕೂ ಚಾರಿತ್ರಿಕ ಕಾರಣಗಳನ್ನು ಸ್ಪಷ್ಟವಾಗಿ ಕೊಡಬಹುದು :

1) ಕರ್ನಾಟಕದಲ್ಲಿ ಬ್ರಿಟಿಷ್ ಸಾರ್ವಭೌಮತ್ವವನ್ನೊಪ್ಪಿಕೊಂಡಿದ್ದ ಸಂಸ್ಥಾನಗಳಲ್ಲಿ ಸರಕಾರಿ ಉದ್ಯೋಗಸ್ಥರಾಗಿದ್ದವರೇ ಕನ್ನಡ ಚಿಂತನೆಗೆ ತೊಡಗಿದ್ದು ಇಂಗ್ಲಿಷ್ ಸ್ವೀಕಾರಕ್ಕೆ ಕಾರಣವಾಯಿತು.

2) ಸ್ವಾತಂತ್ರ್ಯ ಚಳವಳಿಯ ಅಂಗವಾಗಿ ಮೂಡಿಬಂದ 'ಹಿಂದೀ ರಾಷ್ಟ್ರೀಯತೆ' ಹಿಂದೀ ಭಾಷೆಯ ಸ್ವೀಕಾರಕ್ಕೆ ಕಾರಣವಾಯಿತು.

3) ಕನ್ನಡ ಏಕೀಕರಣ ಚಳವಳಿ ಹಿಂದಿ –ಇಂಗ್ಲಿಷ್‌ಗಳನ್ನು ಹಿಂದಿಕ್ಕಿ ಕನ್ನಡವನ್ನೇ ಮುಖ್ಯವಾಗಿಸಿತು.

## 2. ಕನ್ನಡಾಭಿಮಾನ

ಕನ್ನಡದ ಬೆಳವಣಿಗೆಗೆ ಕನ್ನಡಿಗರಲ್ಲಿ ಅಭಿಮಾನ ಕುಗ್ಗಿ ಹೋಗಿದೆಯೆಂಬ ಕಾರಣಕ್ಕಾಗಿ ಇಂಗ್ಲಿಷ್ ಭಾಷೆ ಹಾಗೂ ಅದರ ಅವಶ್ಯಕತೆಯನ್ನು ಅಮುಖ್ಯವಾಗಿಸಿದ್ದು ಈ ಕಾಲದ ಕೆಲವು ಚಿಂತಕರಲ್ಲಿ ಮುಖ್ಯ ವಿಷಯವಾಗಿ ಕಾಣಿಸಿಕೊಂಡಿದೆ. ಕನ್ನಡಕ್ಕಾಗಿ ದುಡಿದವರಲ್ಲಿ ಮೊದಲಿಗರಾದ ಆಲೂರು ವೆಂಕಟರಾಯರು ಕನ್ನಡನಾಡಿನಲ್ಲಿ ತುಂಬಿಕೊಂಡ ನಿರಭಿಮಾನವನ್ನೂ, ಅದಕ್ಕೆ ಕಾರಣವಾದ ಪರಿಸ್ಥಿತಿಗಳನ್ನೂ ಆರಂಭದಲ್ಲಿ ಗುರುತಿಸಿದ್ದರು. ಇಂಗ್ಲಿಷ್ ಶಿಕ್ಷಣದಿಂದ ಬಹಳಷ್ಟು ಮಾರ್ಪಾಡು ಅವರಲ್ಲಿ ಉಂಟಾಗಿದ್ದರೂ, 1905 ರ ಸುಮಾರಿಗೆ ಅವರಲ್ಲಿ ಮೂಡಿಬಂದ ಕನ್ನಡಾಭಿಮಾನ, ಅವರು ಇಂಗ್ಲಿಷನ್ನು ಅಷ್ಟಾಗಿ ಸ್ವೀಕರಿಸದಂತೆ ಮಾಡಿತು. ರಾಷ್ಟ್ರೀಯ ಚಳವಳಿಯ ಪ್ರೇರಣೆಯಿಂದ ಬ್ರಿಟಿಷ್ ವಿರೋಧಿ ಚಟುವಟಿಕೆ, ಇಂಗ್ಲಿಷ್ ವಿರೋಧಿ ನಿಲುವು ಅವರಲ್ಲಿತ್ತು. ಈ ಬಗೆಯ ಭಾವನೆಯನ್ನು ಅನೇಕ ಕನ್ನಡ ಚಳವಳಿಗಾರರಲ್ಲಿ – ವಿಶೇಷತ: ಕರ್ನಾಟಕ ಏಕೀಕರಣ ಚಳವಳಿಗಾರರಲ್ಲಿ ಕಾಣಬಹುದು.

ಆದರೆ ಇಂಗ್ಲಿಷನ್ನು ವಿರೋಧಿಸದೆ ಕನ್ನಡಾಭಿಮಾನವನ್ನು ತುಂಬಿಕೊಂಡ ಅನೇಕರು ಸರಕಾರೀ ಉದ್ಯೋಗಗಳಲ್ಲಿದ್ದರು. ಇಂಗ್ಲಿಷನ್ನು ಪೂರ್ತಿಯಾಗಿ ಸ್ವೀಕರಿಸುವುದರಿಂದ, ಹಾಗೂ ಅದರ ಅನುಕೂಲತೆಗಳನ್ನು ಹೆಚ್ಚು ಹೇಳುವುದರಿಂದ ಇಂಗ್ಲಿಷ್ ಅಭಿಮಾನಿಗಳು ಕನ್ನಡವನ್ನು ಮೂಲೆಗೊತ್ತುವ ಅಪಾಯವಿತ್ತು. ಇಂಗ್ಲಿಷನ್ನು ವಿರೋಧಿಸಲಾಗದ ಮತ್ತು ಅದನ್ನು ವೈಭವೀಕರಿಸಲಾಗದ ಮಧ್ಯದ ಒಂದು ಸ್ಥಿತಿಯಲ್ಲಿ, ಕನ್ನಡವನ್ನು ಕುರಿತು ಹೆಚ್ಚು ಹೇಳುವುದು ಮತ್ತು ಕನ್ನಡಾಭಿಮಾನವನ್ನು ಪ್ರೇರೇಪಿಸುವುದು ಒಂದೇ ಅವರಿಗೆ ಉಳಿದ ದಾರಿಯಾಗಿತ್ತು.

ಇಂಗ್ಲಿಷಿನ ಅನುಕೂಲತೆಗಳು, ಸಾಹಿತ್ಯ ಸಮೃದ್ಧಿ — ಇವನ್ನು ತಿಳಿದುಕೊಂಡು 'ಕನ್ನಡದಲ್ಲೇನಿದೆ ?' ಎಂದು ಅಸಡ್ಡೆ ಮಾಡುವ ವಿದ್ಯಾವಂತರು ಆ ಕಾಲಕ್ಕಾಗಲೇ ಬಹಳಷ್ಟು ತುಂಬಿಕೊಂಡಿದ್ದರು. 1911 ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಬಿ.ಎಂ.ಶ್ರೀಕಂಠಯ್ಯನವರು ಮಾಡಿದ ಭಾಷಣದಲ್ಲಿ ಇಂಥ ಮನಸ್ಥಿತಿಗೆ ಕಾರಣವನ್ನೂ, ಅದರಿಂದ ಕನ್ನಡಕ್ಕಾಗುವ ಹಾನಿಯನ್ನೂ ವಿಶ್ಲೇಷಿಸಿ, ಕನ್ನಡಿಗರು ಕನ್ನಡಾಭಿಮಾನವನ್ನು ತುಂಬಿಕೊಳ್ಳಬೇಕಾದ ಅಗತ್ಯವನ್ನು ಹೇಳುತ್ತಾರೆ; ಅಭಿಮಾನವನ್ನು ಪ್ರೇರೇಪಿಸುತ್ತಾರೆ. 1935 ರಲ್ಲಿ ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ ಮಾಡಿದ ಭಾಷಣದಲ್ಲಿ 'ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ, ಕನ್ನಡ' ಎನ್ನುತ್ತಾರೆ.[14] ಆದರೆ ಇಂಗ್ಲಿಷ್ ಭಾಷೆಯ ಸಮೃದ್ಧಿಯ ಕುರಿತಾಗಲೀ, ಅದರ ಪ್ರಾಮುಖ್ಯತೆಯ ಕುರಿತಾಗಲೀ 'ಶ್ರೀ'ಯವರಿಗೆ ಸಂಶಯವೇ ಇರಲಿಲ್ಲ. ಆದರೆ ಅವರಿಗೆ ಕನ್ನಡವೇ ಮುಖ್ಯವಾಗಿತ್ತು; ಕನ್ನಡ ಅಭಿಮಾನವೇ ಮುಖ್ಯವಾಗಿತ್ತು.

ಕನ್ನಡಿಗರ ನಿರಭಿಮಾನಕ್ಕೆ ಕಾರಣವನ್ನು ಕರ್ಪೂರ ಶ್ರೀನಿವಾಸರಾಯರು ಹೀಗೆ ಗುರುತಿಸುತ್ತಾರೆ: ''ಎಲ್ಲರಿಗೂ ಬಾಲ್ಯದಲ್ಲಿಯೇ ದೇಶಭಾಷೆಯಲ್ಲಿ ಅಭಿಮಾನ ಹುಟ್ಟುವುದಾದರೆ, ಅವರಲ್ಲಿ ಕೆಲವರಾದರೂ ಪ್ರೌಢರಾದ ಮೇಲೆ ಅನುಕೂಲ್ಯ ದೊರೆತಾಗ ದೇಶಭಾಷಾ ಸೇವೆಯನ್ನು ಯಥಾಶಕ್ತಿ ಮಾಡುವುದರಲ್ಲಿ ಯಾವ ಸಂದೇಹವಾ ಇಲ್ಲ. ಆದರೆ ನಮ್ಮ ಮೈಸೂರು ಸಂಸ್ಥಾನದಲ್ಲಿ ಜನರಿಗೆ ಆಂಗ್ಲೇಯ ಭಾಷೆ ವ್ಯಾಸಂಗದಲ್ಲಿ ಅಭಿರುಚಿ ಹೆಚ್ಚೇ ಹೊರತು ಈ ಬಡ ಕನ್ನಡದ ಮೇಲೆ ಅಭಿಮಾನ ಕಡಿಮೆ. ಈ ಶೋಚನೀಯವಾದ ಅವಸ್ಥೆಗೆ ನಮ್ಮವರಿಗೆ ಬಾಲ್ಯದಲ್ಲಿ ಒದಗುವ ಶಿಕ್ಷಣವೇ ಮುಖ್ಯ ಕಾರಣ. ಚಿಕ್ಕ ವಯಸ್ಸಿನಲ್ಲಿಯೇ ಇಂಗ್ಲೀಷನ್ನು ಕಲಿಯುವುದಕ್ಕೆ ಪ್ರಾರಂಭಿಸುತ್ತಾರೆ. ಏತಕ್ಕೆಂದರೆ ಇಂಗ್ಲೀಷು ಭಾಷೆಯಲ್ಲಿ ಪ್ರಾವೀಣ್ಯವನ್ನು ಪಡೆದವನಿಗೆ ಮಾತ್ರವೇ ಸರ್ಕಾರದ ದೊಡ್ಡ ದೊಡ್ಡ ಉದ್ಯೋಗಗಳು ದೊರೆಯುತ್ತವೆ. ಅರಮನೆ ಆಸ್ಥಾನಗಳ ಬಾಗಿಲುಗಳೂ ಕೋರ್ಟು ಕಚೇರಿಗಳ ಬಾಗಿಲುಗಳೂ ಇಂಗ್ಲೀಷು ಭಾಷೆಯನ್ನು ವ್ಯಾಸಂಗ ಮಾಡಿದವನಿಗೆ ತೆರೆಯುತ್ತವೆಯೇ ವಿನಾ ಇತರರಿಗಲ್ಲ. ದೇಶಭಾಷೆಯಲ್ಲಿ ಎಷ್ಟು ಪಾಂಡಿತ್ಯವನ್ನು ಸಂಪಾದಿಸಿದರೂ ಅದರಿಂದ ಅರೆಹೊಟ್ಟೆ ಜೀವನವೇ ಹೊರತು ತುಂಬು ಹೊಟ್ಟೆಯ ಜೀವನವಾಗುವುದಿಲ್ಲ. ಈ ಹೊಟ್ಟೆಪಾಡಿನ ಹೋರಾಟದಲ್ಲಿ ಸ್ವದೇಶ

ಸ್ವಭಾಷೆ ಮುಂತಾದುವೆಲ್ಲಾ ಕಣ್ಮರೆಯಾಗುತ್ತವೆ. ಒಂದು ಮಾತ್ರ ಕಣ್ಣ ಮುಂದೆ ಹೊಳೆಯುತ ಸರ್ವದಾ ನಿಂತಿರುತ್ತದೆ; ಅದೇನೆಂದರೆ ಸ್ವಾರ್ಥತೆ. ಇದು ತನ್ನ ದಾರಿಗಡ್ಡವಾದುದನ್ನೆಲ್ಲ ತಳ್ಳಿಕೊಂಡು ಮುಂದೆ ಹೋಗುತ್ತದೆ. ಹೀಗಿರಲು ದೇಶಭಾಷೆಯಲ್ಲಿ ಜನರಿಗೆ ಅಭಿಮಾನವನ್ನು ಹುಟ್ಟಿಸುವ ಬಗೆ ಹೇಗೆಂಬುದನ್ನು ನಾವೆಲ್ಲರೂ ಏಕಮನಸ್ಸಿನಿಂದ ಚಿಂತಿಸಬೇಕಾದುದು ನಮ್ಮ ಕರ್ತವ್ಯವಲ್ಲವೆ?'' [15]

ಕೆ.ಪಿ. ಪುಟ್ಟಣ್ಣಶೆಟ್ಟರೂ ಇಂಥದೇ ಕಾರಣವನ್ನು ಕೊಡುತ್ತಾರೆ:
''... ಬುದ್ಧಿವಂತರಾದವರೆಲ್ಲರೂ ಹೊಟ್ಟೆಪಾಡಿಗಾಗಿ ಸರ್ಕಾರಿ ಉದ್ಯೋಗಗಳನ್ನು ಸಂಪಾದಿಸುವುದೊಂದನ್ನೇ ಇಹದಲ್ಲಿ ಮುಖ್ಯೋದ್ದೇಶವನ್ನಾಗಿಟ್ಟುಕೊಂಡು ಎಳೆತನದಿಂದಲೂ ಆಂಗ್ಲಭಾಷೆಯನ್ನೇ ಅಭ್ಯಾಸ ಮಾಡಿ ಕನ್ನಡವನ್ನು ಮೂಲೆಗೆ ತಳ್ಳಿರುವರು.'' [16] ಇಲ್ಲಿ ಆಡಳಿತ ಭಾಷೆ ಇಂಗ್ಲಿಷಾದ್ದರಿಂದ ಉಂಟಾದ ಪರಿಣಾಮವನ್ನು ಹೇಳಿದ್ದಾರೆ.

ಆರ್. ನರಸಿಂಹಾಚಾರ್ಯರು ಕನ್ನಡದ ಹೀನಸ್ಥಿತಿಗೆ, ''ಕನ್ನಡಿಗರಿಗೆ ತಮ್ಮ ಭಾಷೆಯಲ್ಲಿರಬೇಕಾದ ಆದರಾತಿಶಯಕ್ಕೆ ಪ್ರತಿಯಾಗಿ ಅಸಡ್ಡೆ ನೆಲೆಗೊಂಡಿರುವುದು ಪ್ರಬಲ ಕಾರಣವೆಂದು ಹೇಳಬಹುದು'' ಎನ್ನುತ್ತಾರೆ. ''ಈಗಿನ ಶಿಕ್ಷಣ ಪದ್ಧತಿಯೂ ಈ ಅಸಡ್ಡೆಗೆ ಸಹಕಾರಿಯಾಗಿದೆ. ಪಾಠಶಾಲೆಗಳಲ್ಲಿ ಎಲ್ಲಾ ವಿಷಯಗಳನ್ನೂ ಇಂಗ್ಲಿಷ್ ಭಾಷೆಯಲ್ಲಿಯೇ ಕಲಿಸುತ್ತಾರೆ... ಇಂಗ್ಲಿಷ್ ಬಲ್ಲವರೇ ಬುದ್ಧಿವಂತರು, ದೇಶಭಾಷಾ ಪಂಡಿತರು ಅಪ್ರಯೋಜಕರು ಎಂಬ ನಿಷ್ಕಾರಣವಾದ ಭಾವನೆ ಹುಟ್ಟಿದೆ. ಸರಕಾರದ ಕಾಗದಪತ್ರಗಳೆಲ್ಲಾ ಇಂಗ್ಲಿಷ್ ಭಾಷೆಯಲ್ಲಿಯೇ ಇವೆ... ನಮ್ಮಲ್ಲಿ ನೆಲೆಗೊಂಡಿರುವ ಅಸಡ್ಡೆಯೆಂಬ ಪಿಶಾಚವನ್ನು ದೇಶಾಭಿಮಾನ ಭಾಷಾಭಿಮಾನಗಳೆಂಬ ಮಂತ್ರಗಳ ಬಲದಿಂದ ಉಚ್ಚಾಟನೆ ಮಾಡಿದರೆ ಭಾಷೋನ್ನತಿಯ ಕೆಲಸವು ಕೂಡಿದಮಟ್ಟಿಗೆ ಫಲಕಾರಿಯಾಗಬಹುದು.'' [17] ಎಂದೂ ಅವರು ಅಭಿಪ್ರಾಯ ಪಡುತ್ತಾರೆ. ಇವರಲ್ಲಿ ಇಂಗ್ಲಿಷ್ ವಿರೋಧೀ ಧೋರಣೆ ಅಷ್ಟಿಲ್ಲವಾದರೂ, ಅದರಿಂದಾಗಿ ಕನ್ನಡಕ್ಕೆ ಉಂಟಾದ ಹಾನಿಯ ಅರಿವಿದೆ. ಇದಕ್ಕೆ ಅವರು ಸೂಚಿಸುವ ಪರಿಹಾರ ಮಾರ್ಗ — ನಾಡಿನ ಏಕೀಕರಣ, ಅಭಿಮಾನ, ಆಡಳಿತ — ಶಿಕ್ಷಣ — ವ್ಯವಹಾರಗಳಲ್ಲಿ ಕನ್ನಡದ ಬಳಕೆ, ಅದಕ್ಕೆ ಅವಶ್ಯಕವಾದ ಭಾಷಾಭಿವೃದ್ಧಿ — ಇವುಗಳು.

ಭಾಷಾಭಿಮಾನಕ್ಕೆ ಅತ್ಯಂತ ಮಹತ್ವ ಕೊಟ್ಟಿರುವ ದಿವಾಕರ ರಂಗರಾಯರು ಹಾಗೂ ತಿ.ತಾ. ಶರ್ಮ ಅವರು, ಇಂಗ್ಲಿಷ್ ಭಾಷೆಯಿಂದಾದ ಲಾಭವನ್ನು ಒಪ್ಪಿ-ಕೊಂಡರೂ, ಅದರಿಂದಾದ ಅಪಕಾರವನ್ನು ಕುರಿತೂ ಹೇಳುತ್ತಾರೆ; ಇಂಗ್ಲಿಷಿನಿಂದಲೇ ಎಲ್ಲವೂ ಅಲ್ಲ ಎಂಬ ಅಭಿಪ್ರಾಯವನ್ನೂ ಸೂಚಿಸುತ್ತಾರೆ.[18]

## 3. ಇಂಗ್ಲಿಷ್ ಕುರಿತ ಭ್ರಾಂತಿಯ ಬಗ್ಗೆ

ಇಂಗ್ಲಿಷ್ ಭಾಷೆಯ ವಿಷಯದಲ್ಲಿ ಅಷ್ಟೊಂದು ಮುಖ್ಯವಲ್ಲದ, ಆದರೆ ಬಹಳ ಪರಿಣಾಮಕಾರಿಯಾದ ಒಂದು ಅಂಶವನ್ನು ಸ್ವಾತಂತ್ರ್ಯಪೂರ್ವದ ಕನ್ನಡ ಚಿಂತಕರು ಗುರುತಿಸಿದ್ದಾರೆ. ಕನ್ನಡಿಗರ ಮನಸ್ಸು ಇಂಗ್ಲಿಷ್ ಭಾಷೆಯ ಕುರಿತು ಒಂದು ಬಗೆಯ ಭ್ರಾಂತಿಗೊಳಗಾದದ್ದನ್ನೂ, ಅದರಿಂದಾದ ತೊಂದರೆಗಳನ್ನೂ ಅವರು ವಿವರಿಸುತ್ತಾರೆ. ಆರ್. ನರಸಿಂಹಾಚಾರ್ಯರ ಪ್ರಕಾರ ಅದು, 'ಅಸಡ್ಡೆ ಎಂಬ ಪಿಶಾಚ'; ಅದಕ್ಕೆ 'ದೇಶಾಭಿಮಾನ, ಭಾಷಾಭಿಮಾನಗಳೆಂಬ ಮಂತ್ರಗಳ ಬಲ' ದಿಂದಲೇ ಉಚ್ಚಾಟನೆ. ಕೆ.ಪಿ. ಪುಟ್ಟಣ್ಣಶೆಟ್ಟರು, "ಇಂಗ್ಲೀಷು ಜೀವಕಳೆಯಿಂದ ಕುಣಿಯುತ್ತಿರುವ ಭಾಷೆ, ನಮ್ಮದು ಸತ್ವವಡಗುತ ಸಾಯುತಲಿರುವ ಭಾಷೆ ಎಂದು ಎಣಿಸುವ ಮಂಕು ನಮ್ಮನ್ನು ಬಲವಾಗಿ ಹಿಡಿದಿರುವುದು. ಮೊಟ್ಟಮೊದಲು ಆ ಮಂಕನ್ನು ಚದರಿಸಬೇಕು" ಎನ್ನುತ್ತಾರೆ. ಅವರೇ ತಿಳಿಸಿರುವಂತೆ, "ನಾನು ಸಾಯುತ್ತಿದ್ದೇನೆ, ನಾನು ಬದುಕುವುದಿಲ್ಲ — ಎಂಬ ಭ್ರಾಂತಿಯು ಯಾವನಿಗಾದರೂ ಹಿಡಿದರೆ ಅಂಥವನಿಗೆ ಶೀಘ್ರದಲ್ಲಿಯೇ ಸಾವು ನಿಶ್ಚಯವು"[19] ಎಂಬ ಮಾತು ಭಾಷೆಯಮಟ್ಟಿಗೂ ನಿಜವೆನಿಸುತ್ತದೆ. ಭಾಷೆಯ ಬೆಳವಣಿಗೆಗೂ ಅದರ ಉಳಿವಿಗೂ ಇಂತಹ ಭಾವನೆಗಳೂ ದಾಸ್ಯವೂ ದೊಡ್ಡ ತೊಡಕೆಂಬುದನ್ನು ಕಂಡುಕೊಂಡು, ಇಂಗ್ಲಿಷ್ ಕನ್ನಡದಂತೆಯೇ ಇರುವ, ಕನ್ನಡದ ಬೆಳವಣಿಗೆಗೆ ಸಹಾಯಕವಾಗಬಲ್ಲ ಒಂದು ಭಾಷೆ — ಎಂಬ ಭಾವನೆಯನ್ನು ಉಂಟುಮಾಡಲು ಯತ್ನಿಸುತ್ತಾರೆ. ಇಂಗ್ಲಿಷ್-ಕನ್ನಡ ಸಂಬಂಧ ಸುಸಂಗತವಾಗಿರಲು ಅನಾರೋಗ್ಯಕರ ಭಾವನೆಗಳಿಂದಾಗುವ ತೊಂದರೆಗಳನ್ನು ಅಲಕ್ಷಿಸುವಂತಿಲ್ಲ.

## 4. ಇಂಗ್ಲಿಷಿನಿಂದಾಗುವ ತೊಂದರೆಗಳು

ಕನ್ನಡದ ಕುರಿತು ಚಿಂತಿಸಿದವರೆಲ್ಲ ಇಂಗ್ಲಿಷಿನಿಂದುಂಟಾದ, ಆಗಬಹುದಾದ ತೊಂದರೆಗಳನ್ನು ಗಮನಿಸಿಯೇ ಇದ್ದಾರೆ. ಆದರೆ ಅದರ ಮೂಲಕಾರಣವನ್ನೂ, ಅದಕ್ಕೂ ಸಮಾಜದ ಇನ್ನಿತರ ವಿದ್ಯಮಾನಗಳಿಗೂ ಇರುವ ಸಂಬಂಧಗಳನ್ನು ಗುರುತಿಸಿ ಅದನ್ನು ನಿವಾರಿಸಲು ಯೋಗ್ಯವಾದ ಪರಿಹಾರವನ್ನೂ ಸೂಚಿಸಿರುವುದು ಕಡಿಮೆ. ಸ್ವಾತಂತ್ರ್ಯಕ್ಕೆ ಮೊದಲಿನವರಲ್ಲಿ ಇಂತಹ ಚಿಂತನೆಯ ಕೆಲವು ಸ್ಪಷ್ಟವಾದ ನೋಟಗಳಿವೆ.

ಎಚ್.ವಿ. ನಂಜುಂಡಯ್ಯನವರು ಇಂಗ್ಲಿಷಿನಿಂದಾಗಿರುವ ತೊಂದರೆಗಳನ್ನು ಹೀಗೆ ಗ್ರಹಿಸುತ್ತಾರೆ: 1) ಅದು ಜನಸಾಮಾನ್ಯರ ಭಾಷೆಯಾಗದು.[20] 2) ಕೋರ್ಟು ಕಚೇರಿಗಳನ್ನು ಇಂಗ್ಲಿಷನಲ್ಲಿ ನಡೆಸಬೇಕಾದ ವೈಪರೀತ್ಯ ನಿರ್ಮಾಣವಾಗಿದೆ.[21]
3) ಇಂಗ್ಲಿಷನ್ನೇ ಪಾಠಪ್ರವಚನಗಳಿಗೆ ಉಪಯೋಗಿಸುವುದರಿಂದ ಅನವಶ್ಯಕವಾದ ಶಕ್ತಿವ್ಯಯ ಉಂಟಾಗುತ್ತದೆ.[22]

ಕರ್ಪೂರ ಶ್ರೀನಿವಾಸರಾಯರು ಹಾಗೂ ಕೆ.ಪಿ. ಪುಟ್ಟಣ್ಣಸೆಟ್ಟರು, ಹೊಟ್ಟೆಪಾಡಿಗಾಗಿ ಇಂಗ್ಲಿಷನ್ನು ಅವಲಂಬಿಸಬೇಕಾದ ಪರಿಸ್ಥಿತಿಯನ್ನೂ, ಅದರಿಂದಾಗಿ ಅವರು ಕನ್ನಡವನ್ನು ಮೂಲೆಗುಂಪಾಗಿಸುತ್ತಾರೆಂಬುದನ್ನೂ ಹೇಳುತ್ತಾರೆ.[23] ಆದರೆ ಈ ಪರಿಸ್ಥಿತಿಗೆ ಕಾರಣವಾದ ಸಮಸ್ಯೆಗಳ ಕುರಿತು ಅವರು ಹೆಚ್ಚೇನೂ ಹೇಳುವುದಿಲ್ಲ.

ಆಡಳಿತ, ನ್ಯಾಯಾಲಯಗಳಲ್ಲಿ ಇಂಗ್ಲಿಷಿನ ಬಳಕೆಯಿಂದಾಗುವ ಪರಿಣಾಮಗಳನ್ನು ಮಾಸ್ತಿಯವರು ವಿವರಿಸುತ್ತಾರೆ: ''ಇಂಗ್ಲೀಷಿನಲ್ಲಿ ಕೆಲಸ ನಡೆಯುವ ಸಂಸ್ಥೆಯಲ್ಲಿ, ನಮ್ಮಲ್ಲಿ ಹಿರಿಯರಾದವರನೇಕರು ಆ ಭಾಷೆಯ ಪರಿಚಯವಿಲ್ಲದ ಕಾರಣ ಭಾಗಿಗಳಾಗಲಾರರು. ಇಂಥವರು ಪ್ರಪಂಚ ಜ್ಞಾನದ ಫಲವು ನಮ್ಮ ಆಡಳಿತಕ್ಕೆ ಸಿಕ್ಕಬೇಕಾದರೆ ಕೆಲಸವೆಲ್ಲ ಕನ್ನಡದಲ್ಲಿ ನಡೆಯಬೇಕು. ಕಾಯಿದೆ ಕಾನೂನುಗಳೂ ಕನ್ನಡದಲ್ಲಿ ಮುಖ್ಯವಾಗಿ ಪ್ರಚುರವಾಗಬೇಕು. ಅವು ಆಗುವುದು ಜನರಿಗಾಗಿ, ಅವು ಇರುವುದು ಅವರಿಗೆ ತಿಳಿಯದ ಭಾಷೆಯಲ್ಲಿ. ಇದರಿಂದ ಯಾವ ಪ್ರಯೋಜನವೂ ಇಲ್ಲ. ನ್ಯಾಯಸ್ಥಾನಗಳಲ್ಲಂತೂ ಇಂಗ್ಲಿಷಿನ ವ್ಯವಹಾರಣೆಯು ಕೇವಲ ಅನುಚಿತವೆಂದೇ ಹೇಳಬೇಕು. ದೂರು

ಹೊತ್ತುಕೊಂಡು ನ್ಯಾಯಾಧೀಶನ ಮುಂದೆ ನಿಂತಿರುವವನ ಮೇಲೆ ದೂರನ್ನು ಬರೆಯುವುದು ಇಂಗ್ಲೀಷಿನಲ್ಲಿ, ಅದನ್ನು ಕುರಿತು ರುಜುವಾತನ್ನು ಬರೆದುಕೊಳ್ಳುವುದು ಇಂಗ್ಲೀಷಿನಲ್ಲಿ; ಆಮೇಲೆ ಅದನ್ನು ಓದಿ ಅವನಿಗೆ ಅರ್ಥ ಹೇಳಬೇಕು. ಲಾಯರುಗಳ ವಾದ ಇಂಗ್ಲೀಷಿನಲ್ಲಿ, ತೀರ್ಪು ಇಂಗ್ಲೀಷಿನಲ್ಲಿ. ಇದೆಲ್ಲ ತೀರ ಹಾಸ್ಯಾಸ್ಪದವಾಗಿದೆ.... ಎಲ್ಲ ಜನರ ಜ್ಞಾನದ ಫಲವನ್ನೂ ಆಡಳಿತವು ಪಡೆಯುವುದೂ, ಎಲ್ಲ ಜನಕ್ಕೂ ಆಡಳಿತದ ಸ್ವರೂಪವು ತಿಳಿಯುವುದೂ ರಾಜ್ಯದ ಏಳಿಗೆಯ ಮೂಲತತ್ತ್ವಗಳು. ನಾವು ಈ ತತ್ತ್ವಗಳನ್ನು ಸಾಧಿಸಬೇಕಾದರೆ ಕನ್ನಡನಾಡಿನ ಆಡಳಿತದ ಕೆಲಸವೆಲ್ಲ ಕನ್ನಡದಲ್ಲಿ ನಡೆಯುವಂತೆ ಮಾಡಬೇಕು.''[24]

ಬ್ರಿಟಿಷರು ಆಡಳಿತ, ಶಿಕ್ಷಣಗಳಲ್ಲಿ ಇಂಗ್ಲಿಷನ್ನು ಹೇರಿದ್ದರಿಂದ ಕನ್ನಡಿಗರಿಗೆ ತಮ್ಮ ಭಾಷೆಯ ಬಗ್ಗೆ ಒಂದು ಬಗೆಯ ತಿರಸ್ಕಾರ ಭಾವನೆ ಹುಟ್ಟಿ ಬೆಳೆಯಲು ಕಾರಣವಾದುದನ್ನೂ[25] ಮೈಸೂರಿನಲ್ಲಿ ಇಂಗ್ಲಿಷ್ 'ಅರಸುತನದ ಗದ್ದುಗೆಯೇರಿ 'ಅತ್ತೆತನ'ದ ಅಧಿಕಾರ ನಡೆಸುವು'ದನ್ನೂ[26] ವಿವರಿಸುವ ಮುದವೀಡು ಕೃಷ್ಣರಾಯರು, ''ಆದರೆ ಹಿಂದಿ ರಾಷ್ಟ್ರದಲ್ಲೆಲ್ಲ ಪ್ರಾಂತಗಳ ಪರಸ್ಪರ ವಿಚಾರಗಳ ಬಳಕೆಗೆ, ವ್ಯವಹಾರದ ಅನುಕೂಲತೆಗೆ ಈಗ ಮುಖ್ಯ ಸಾಧನವಾಗಿರುವ ತೀರ ಪರಕೀಯವಾದ ಇಂಗ್ಲಿಷು ಭಾಷೆಯು ನಮ್ಮ ರಾಷ್ಟ್ರದ 'ರಾಜಕೀಯ ಗುಲಾಮಗಿರಿ'ಯ ಚಿರಂತನ ಚಿಹ್ನೆಯಾಗಿ ಕೊನೆಯವರೆಗೂ ಇಲ್ಲಿ ನೆಲೆಸಬೇಕೆಂದು ಯಾರೂ ಅಪೇಕ್ಷಿಸಲಾರರು; ನಾನೂ ಅಪೇಕ್ಷಿಸುವುದಿಲ್ಲ. ಆದುದರಿಂದ ಈಗಿನ ಇಂಗ್ಲಿಷಿನ ಸ್ಥಳದಲ್ಲಿ ಬೇರೊಂದು ನಮ್ಮದೇ ಆದ ರಾಷ್ಟ್ರಭಾಷೆಯು ನಮಗೆ ಬೇಕು'' ಎನ್ನುತ್ತಾರೆ.[27] ಇಂಗ್ಲಿಷಿನಿಂದಾಗುವ ಲಾಭಗಳನ್ನು ಅವರು ಹೇಳುತ್ತಾರೆ; ಆದರೆ ಅದರಿಂದ ತೊಂದರೆಗಳುಂಟಾಗುವವರೆಗೂ ಅದು ಇಲ್ಲಿರಬಾರದು — ಎನ್ನುವಲ್ಲಿ ಒಪ್ಪಂದ ಮನೋಭಾವವಿಲ್ಲ; ತೀವ್ರಗಾಮಿ ಧೋರಣೆಯಿದೆ.

ಇಂಗ್ಲಿಷ್ ಭಾಷೆಯಿಂದ ಬಹಳ ಲಾಭವಿದೆಯೆಂದೂ, ಅದಕ್ಕೆ ವಿದ್ಯಾಭ್ಯಾಸ ಕ್ರಮದಲ್ಲಿ ಗಣ್ಯಸ್ಥಾನವಿರಬೇಕೆಂದೂ ಸಿ.ಕೆ. ವೆಂಕಟರಾಮಯ್ಯನವರು ಒಪ್ಪುತ್ತಾರೆ. ''ಜೀವಾವಧಿ ವ್ಯಾಸಂಗ ಮಾಡಿದರೂ ಪರಭಾಷೆಯಾದ ಇಂಗ್ಲಿಷ್ ಭಾಷೆಯು ಸ್ವಾಧೀನವಾಗುವುದು ಕಷ್ಟ'' ಎಂದು ಅವರು ಹೇಳುತ್ತಾರೆ.[28]

ಇಂಗ್ಲಿಷ್ ಭಾಷೆ ಆಡಳಿತದಲ್ಲಿರುವುದರಿಂದಾಗುವ ತೊಂದರೆಯನ್ನು ಗಮನಿಸಿ ತಿ.ತಾ. ಶರ್ಮ ಅವರು, ''ಕನ್ನಡ ರೈತನ ಕಷ್ಟ ಪರಿಹಾರವಾಗುವುದು ಕನ್ನಡದ ಮೂಲಕವೇ. ಹೀಗಾಗುವುದೇ ಸಹಜ, ನ್ಯಾಯ. ಈ ಸಾಮಾನ್ಯ ತತ್ವವನ್ನು – ಅಲ್ಲ ಸತ್ಯವನ್ನು ಗ್ರಹಿಸಿದ ಮೇಲೂ ಸಹ ತಾಲ್ಲೂಕು ಮತ್ತು ಜಿಲ್ಲಾ ಆಡಳಿತ ಕಚೇರಿಗಳಲ್ಲೂ ಅಠಾರಾ ಕಚೇರಿಯ ನಾನಾ ಶಾಖೆಗಳಲ್ಲೂ ವ್ಯವಹಾರ ವ್ಯಾಪಾರವೆಲ್ಲ ವಿದೇಶೀ ಆಂಗ್ಲಭಾಷೆಯಲ್ಲಿ ಬೋರೇಗೌಡನಿಗರ್ಥವಾಗದ ಕೃತಕ ಭಾಷೆಯಲ್ಲೇಕೆ ನಡೆಯಬೇಕು?''[29] ಎನ್ನುತ್ತಾರೆ. ರಾಜ್ಯದ ''ರಾಜ್ಯಾಂಗ ವ್ಯವಸ್ಥೆಯ ಮೂಲ ಸಾಹಿತ್ಯವು ಕನ್ನಡವೇ ಆಗಿರಬೇಕು. ಆಂಗ್ಲಭಾಷಾಪಾಕವಾಗಿ ಅನಂತರ ಭಾಷಾಂತರ ಪಾಕಕ್ಕೆ ಪರಿವರ್ತನೆಗೊಳ್ಳಬಾರದು!'' ಎಂದೂ ಅವರು ಹೇಳುತ್ತಾರೆ.[30]

ಇಂಗ್ಲಿಷಿನಿಂದಾದ ತೊಂದರೆಗಳನ್ನು ಕನ್ನಡ ಚಿಂತಕರು ಸ್ವಾತಂತ್ರ್ಯಕ್ಕೆ ಮೊದಲು ಈ ಐದು ನೆಲೆಗಳಲ್ಲಿ ಮುಖ್ಯವಾಗಿ ಗುರುತಿಸುತ್ತಾರೆ: 1) ಅದು ಜನರ ಭಾಷೆಯಾಗದು 2) ಕೋರ್ಟು, ಕಚೇರಿಗಳಲ್ಲಿ ಅದರ ಬಳಕೆಯಾಗುವುದು ಅನುಚಿತ 3) ಶೈಕ್ಷಣಿಕ ತೊಂದರೆಗಳುಂಟಾಗುತ್ತವೆ. 4) ಹೊಟ್ಟೆಪಾಡಿಗಾಗಿ ಇಂಗ್ಲಿಷ್ ಕಲಿತು, ಸರಕಾರೀ ಉದ್ಯೋಗ ಪಡೆಯುವ ಭರದಲ್ಲಿ ಕನ್ನಡವೂ, ಕನ್ನಡಾಭಿಮಾನವೂ ಮೂಲೆಗುಂಪಾಗುವುದು. 5) ರಾಜಕೀಯ ಗುಲಾಮಗಿರಿಯನ್ನು ಅದು ಪೋಷಿಸುತ್ತದೆ.

ಈ ಐದು ಸಂಗತಿಗಳಲ್ಲಿ ಕ್ರಮವಾಗಿ ಇಂಗ್ಲಿಷ್ ಭಾಷೆಯ ಸಂಬಂಧದಿಂದ ಕನ್ನಡ ದುಸ್ಥಿತಿಗಿಳಿಯುತ್ತ ಹೋಗುವುದನ್ನು ಗಮನಿಸಬಹುದು. ಇವೆಲ್ಲವೂ ಒಂದಕ್ಕೊಂದು ಸಂಬಂಧ ಹೊಂದಿವೆ; ಈ ತೊಡಕುಗಳು ಸಮಾಜದ ಎಲ್ಲ ಭಾಗಗಳನ್ನೂ ವ್ಯಾಪಿಸುತ್ತವೆ. ಇಲ್ಲಿನ ಚಿಂತಕರು ಎಲ್ಲ ಸಮಸ್ಯೆಗಳಿಗೆ ಮೂಲಕಾರಣಗಳನ್ನಾಗಲಿ, ಸಮಸ್ಯೆಗಳ ಸ್ವರೂಪವನ್ನಾಗಲಿ ಖಚಿತವಾಗಿ ಗುರುತಿಸದಿದ್ದರೂ, ಒಂದೊಂದು ಪಾರ್ಶ್ವಗಳಿಂದ ಸಮಸ್ಯೆಯ ಸಮಗ್ರತೆಯನ್ನು ಗುರುತಿಸಿಕೊಂಡಿದ್ದಾರೆ. ಎಷ್ಟೇ ಆದರೂ ಇವುಗಳಲ್ಲಿ ಒಬ್ಬೊಬ್ಬ ಚಿಂತಕರನ್ನು ಪ್ರತ್ಯೇಕ ಪ್ರತ್ಯೇಕವಾಗಿ ನೋಡಿದರೆ, ಸಮಸ್ಯೆಗಳನ್ನು ಬೇರೆ ಬೇರೆ ಮಗ್ಗುಲುಗಳಿಂದ ನೋಡಬಹುದು; ಆದರೆ ಇಡಿಯಾಗಿ, ಒಂದು ಕಾಲಘಟ್ಟದ ಒಂದು ಚಿಂತನೆಯ ಪ್ರವಾಹವಾಗಿ ಇವುಗಳನ್ನು ಗಮನಿಸಬೇಕು. ಆ ಕಾಲದ ಸಮಸ್ಯೆಗಳ ಹಿನ್ನೆಲೆ

ಯಲ್ಲಿ ಈ ಸಂಗತಿಗಳ ಹಾಗೂ ಭಾಷೆಗಳ ನಡುವೆ ಇರಬೇಕಾದ ಸಂಬಂಧಗಳ ಕುರಿತು ಸಾಮುದಾಯಿಕ ನಿಲುವನ್ನು ವ್ಯಕ್ತಪಡಿಸುವಾಗ ಆ ಚಿಂತನೆಯ ಪ್ರವಾಹ ಎಲ್ಲ ಸಮಗ್ರತೆಯನ್ನೂ ಒಳಗೊಳ್ಳುತ್ತದೆ — ಎನ್ನಬಹುದು.

## 5. ಕನ್ನಡದ ಬೆಳವಣಿಗೆ

ಕನ್ನಡ ಜನರ ಅಭಿವೃದ್ಧಿಗೆ ಕನ್ನಡ ಭಾಷೆ ಬೆಳೆಯಬೇಕೆಂದೂ, ಅದಕ್ಕೆ ಇಂಗ್ಲಿಷ್ ನಲ್ಲಿರುವ ಜ್ಞಾನಗಳನ್ನೆಲ್ಲ ಕನ್ನಡಕ್ಕೆ ತರಬೇಕೆಂದೂ ಹಲವು ಮಂದಿ ಚಿಂತಕರು ಕಂಡು ಕೊಂಡಿದ್ದರು. ಸ್ವತಃ ತಾವೇ ಆ ಕೆಲಸಗಳಲ್ಲಿ ತೊಡಗಿದವರಾದ್ದರಿಂದ, ಅವರಲ್ಲಿ ಹೆಚ್ಚಿನವರಿಗೆ ಈ ಕೆಲಸದ ಬಾಹುಳ್ಯ ಚೆನ್ನಾಗಿ ಮನವರಿಕೆಯಾಗಿದ್ದಿತು. ಹಾಗಿದ್ದರೂ, ಕನ್ನಡದ ಬೆಳವಣಿಗೆ ಅವಶ್ಯಕ; ಅದಕ್ಕೆ ಇಂಗ್ಲಿಷ್ ಭಾಷೆಯ ಸಹಾಯ ಅಗತ್ಯ; ಇಂಗ್ಲಿಷ್ ನಿಂದ ಕನ್ನಡಕ್ಕೆ ಗ್ರಂಥಗಳನ್ನು ಭಾಷಾಂತರಿಸುವ ಮೂಲಕ ವಿದ್ವಾಂಸರಲ್ಲಿ ಮೂಡಿದ ಎರಡು ಸ್ಪಷ್ಟ ಸಂಗತಿಗಳಿವು — 1) ಇಂಗ್ಲಿಷನಲ್ಲಿ ಬಹಳಷ್ಟು ಜ್ಞಾನಸಂಪತ್ತಿದೆ ನಿಜ; ಆದರೆ ಆ ಜ್ಞಾನವನ್ನು ಪಡೆಯಲು, ವಿಷಯವನ್ನು ತಿಳಿದುಕೊಳ್ಳಲು ಇಂಗ್ಲಿಷನ್ನೇ ಓದ ಬೇಕಾಗಿಲ್ಲ. 2) ಅವನ್ನು ಕನ್ನಡದ ಮೂಲಕ ಜನ ಓದಬೇಕು; ಅದಕ್ಕೆ ಅವೆಲ್ಲವೂ ಕನ್ನಡ ಭಾಷೆಗೆ ಅನುವಾದಗೊಳ್ಳಬೇಕು.

ಇಲ್ಲಿ ಗಮನಿಸಬೇಕಾದದ್ದು, ಕನ್ನಡವನ್ನು ಬೆಳೆಸುವ ಮೂಲಕ, ಇಂಗ್ಲಿಷ್ ಮೊದಲಾದ ಪಾಶ್ಚಾತ್ಯ ಭಾಷೆಗಳ ಸಹಾಯದಿಂದ ಕನ್ನಡದಲ್ಲೇ ಶಿಕ್ಷಣ ನೀಡಬಹುದು; ಎಲ್ಲ ಆಗುಹೋಗುಗಳಿಗೂ ಅದು ಸಮರ್ಥವಾಗುವಂತೆ ಮಾಡಬಹುದು — ಎಂಬ ನಂಬಿಕೆ. ಕನ್ನಡ ಭಾಷೆ ಬೆಳವಣಿಗೆ ಹೊಂದಲು ಏನೇನು ಮಾಡಬೇಕು, ಭಾಷಾಂತರಕ್ಕೆ ತೊಡಕಾಗಿ ರುವ ಇಂಗ್ಲಿಷನ ಪಾರಿಭಾಷಿಕ ಪದಗಳನ್ನು ಕನ್ನಡದಲ್ಲಿ ಹೇಗೆ ತರಬೇಕು — ಎಂದು ಬಿ.ಎಂ.ಶ್ರೀ.ಯವರಿಂದ ಮೊದಲುಗೊಂಡು ಹಲವರು ಹಲವು ರೀತಿಯಲ್ಲಿ ವಿವರಿಸಿದ್ದಾರೆ. ಅವುಗಳಲ್ಲಿ ಪ್ರಾಯೋಗಿಕವಾಗಿ ಈ ತೊಂದರೆಗಳು ಮತ್ತು ಅವುಗಳ ಪರಿಹಾರದ ಬಗ್ಗೆ ಆಲೋಚಿಸಿದವರಲ್ಲಿ ಕೆಲವರ ಅಭಿಪ್ರಾಯಗಳು ಹೆಚ್ಚು ಮೌಲಿಕವಾದವು. ಎಚ್.ವಿ.ನಂಜುಂಡಯ್ಯ

ನವರು ನ್ಯಾಯಾಲಯದಲ್ಲಿ ಕನ್ನಡ ಬಳಕೆಯಾಗದಿರುವ ಕುರಿತು, ''ದೇಶೀಯ ರಾಜರ ಆಳಿಕೆಗೆ ಒಳಪಟ್ಟ ದೇಶೀಯ ರಾಜ್ಯದಲ್ಲಿಯೇ ಕೋರ್ಟು ಕಚೇರಿಗಳ ಕೆಲಸಗಳನ್ನೆಲ್ಲಾ ಇಂಗ್ಲಿಷ್ ಭಾಷೆಯಲ್ಲಿಯೇ ನಡೆಯಿಸಬೇಕಾಗಿರುವ ವೈಪರೀತ್ಯವನ್ನು ಕಂಡು ಆಶ್ಚರ್ಯವಾಗುತ್ತದೆ. ಇದನ್ನು ತಪ್ಪಿಸುವುದಕ್ಕೆ ಕೆಲವರು ಹೇಳುವ ದೊಡ್ಡ ಕಷ್ಟವೇನೆಂದರೆ — ತೊಡಕಿನ ಮೊಕದ್ದಮೆಗಳಲ್ಲಿ ಬರುವ ಕಾನೂನು ಸಂಬಂಧವಾದ ವಿಷಯಗಳನ್ನು ವಿವರಿಸಿ ತಿಳಿಸುವುದಕ್ಕೆ ಕನ್ನಡ ಭಾಷೆ ಸರಿಹೋಗುವುದಿಲ್ಲ ಎಂಬುದು. ಆದರೆ ಆ ಮೊಕದ್ದಮೆಗಳಿಗೆ ಸಂಬಂಧಪಟ್ಟ ಜನರಿಗೆ ಕನ್ನಡ ಭಾಷೆಯಲ್ಲಿ ವಾದಿಸುವ ಸಾಮರ್ಥ್ಯವಾ ಅನುಭವವಾ ಇಲ್ಲದಿರುವುದೇ ನಿಜವಾದ ಪ್ರತಿಬಂಧಕವೆಂದು ನನಗೆ ತೋರುತ್ತದೆ.''[31] ಸಿ.ಕೆ. ವೆಂಕಟರಾಮಯ್ಯನವರು ಇನ್ನೊಂದು ಸಮಸ್ಯೆಯನ್ನು ಗಮನಿಸುತ್ತಾರೆ, ''ವಿಶ್ವವಿದ್ಯಾನಿಲಯದ ಪ್ರೌಢ ತರಗತಿಗಳ ವಿಜ್ಞಾನ ಭಾಗವನ್ನು ಮಾತ್ರ — ಕಡೆಯ ಪಕ್ಷ ಭಾರತೀಯ ದೇಶಭಾಷೆಗಳ ಪಾರಿಭಾಷಿಕ ಶಬ್ದಗಳ ಏಕೀಕರಣವು ನಡೆದು ನೆಲೆಗೆ ನಿಲ್ಲುವವರೆಗಾದರೂ — ಇಂಗ್ಲಿಷ್ ಭಾಷೆಯಲ್ಲಿ ಬೋಧಿಸಬೇಕಾದೀತು; ಉಳಿದ ತರಗತಿಗಳ ಪಾಠ ಪ್ರವಚನಗಳು ಕನ್ನಡದ ಮೂಲಕ ನಡೆಯಬಹುದಾಗಿದೆ. ತಾತಾ ವಿಜ್ಞಾನ ಸಂಶೋಧನ ಸಂಸ್ಥೆ ಮುಂತಾದವುಗಳಲ್ಲಿ ವ್ಯಾಸಂಗಕ್ಕೆ ಹೋಗುವವರೂ, ವೈಜ್ಞಾನಿಕ ಸಂಶೋಧನೆಗಳನ್ನು ನಡೆಯಿಸುವ ಕನ್ನಡಿಗರೂ ಇನ್ನು ಬಹುಕಾಲ ಇಂಗ್ಲಿಷ್ ಭಾಷೆಯ ಮೂಲಕವೇ ವ್ಯವಹರಿಸುತ್ತಿರಬೇಕಾಗುತ್ತದೆ. ಉಸ್ಮೇನಿಯಾ ವಿಶ್ವವಿದ್ಯಾನಿಲಯದಲ್ಲಿ ಉರ್ದು ಭಾಷೆಯಲ್ಲಿ ವಿಜ್ಞಾನವನ್ನು ಬೋಧಿಸುತ್ತಿರುವುದು ನಿಜವಾದರೂ, ಪಠ್ಯಪುಸ್ತಕಗಳೆಲ್ಲ ತೀರ ಹಳೆಯವಾಗಿರುವುದರಿಂದ ಹೊಸ ಹೊಸ ಸಂಶೋಧನಗಳಿಂದ ಈಚೆಗೆ ಹಲವು ವರ್ಷಗಳಿಂದ ಹೊರಬಿದ್ದ ಸಂಗತಿಗಳಾವುವೂ ಅವುಗಳಲ್ಲಿ ಸೇರಿಲ್ಲವೆಂದೂ, ಅಧ್ಯಾಪಕರು ಅವುಗಳನ್ನು ವಿದ್ಯಾರ್ಥಿಗಳಿಗೆ ಹೇಳಿ ಬರೆಯಿಸುವುದಕ್ಕಾಗಿಯೇ ಬಹಳ ಕಾಲವು ವಿನಿಯೋಗವಾಗುತ್ತದೆಂದೂ, ಆ ಸಂಬಂಧವಾಗಿ ವ್ಯಾಸಂಗದ ತೊಂದರೆಗಳೂ ಅನೇಕವಾಗಿವೆಯೆಂದೂ ಕೇಳಿದ್ದೇನೆ. ಕನ್ನಡದ ಮೂಲಕ ಶಿಕ್ಷಣ ಕೊಡುವಲ್ಲಿ ಈ ಬಗೆಯ ತೊಂದರೆಗಳುಂಟಾಗದಂತೆಯೂ ಪೂರ್ವಸಿದ್ಧತೆಗಳು ನಡೆಯಬೇಕು.''[32] ಇದು ಅಂದಿಗಷ್ಟೇ ಅಲ್ಲ; ಇಂದಿಗೂ ಕನ್ನಡಿಗರ ಮುಂದಿರುವ ಕಾರ್ಯಬಾಹುಳ್ಯ ಹಾಗೂ ಅವರ ಕರ್ತೃತ್ವ ಶಕ್ತಿಗೆ ಸವಾಲಾಗಿರುವ ಸಮಸ್ಯೆಗಳಾಗಿವೆ.

ಡಿ.ವಿ.ಜಿ.ಯವರು ಹೇಳಿರುವ ಈ ಮಾತುಗಳು ಮುಖ್ಯ: ''ಈ ಕಾರ್ಯದಲ್ಲಿ ಪಾರಿಭಾಷಿಕ ಪದಗಳನ್ನು ಸಂಪಾದಿಸುವುದು.... ಈಗ ಇರುವ ವಿಶೇಷ ಕಷ್ಟ. ಆದರೆ ಪದಗಳು ದೊರೆಯುವ ತನಕ ಲೇಖನಿ ಹಿಡಿಯುವುದಿಲ್ಲವೆಂದು ಕಾದಿರುವವನ ಮಶೀಪಾತ್ರೆ ಎಂದೆಂದಿಗೂ ತುಂಬಿಕೊಂಡೇ ಇದ್ದುಬಿಡುವುದು. ಧೈರ್ಯಮಾಡಿ, ದೃಢಪ್ರತಿಜ್ಞೆ ಮಾಡಿ, ಲೇಖಣಿಗಳನ್ನು ನುಗ್ಗಿಸುತ್ತ ಹೋದರೆ, ಪದಗಳು ತಾವಾಗಿಯೇ ಬರುವವು. ಕನ್ನಡವಿಲ್ಲದಿದ್ದರೆ ಸಂಸ್ಕೃತ ಸಿದ್ಧವಾಗಿದೆ; ಸಂಸ್ಕೃತ ಒದಗದೆ ಹೋದರೆ ಇಂಗ್ಲೀಷು ಇದ್ದೇ ಇದೆ.''[33]

## 6. ಹಿಂದೀ ಸಮಸ್ಯೆ

ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರಭಾಷೆ ಹಿಂದೀ ಆಗಬೇಕು ಎನ್ನುವುದರ ಕುರಿತು ಕನ್ನಡ ಚಿಂತಕರು ಬೇರೆ ಬೇರೆ ರೀತಿಯಲ್ಲಿ ಚಿಂತಿಸಿದ್ದಾರೆ. ಬಿ.ಎಂ.ಶ್ರೀಯವರು ಸ್ಪಷ್ಟವಾಗಿಯೇ ಹಿಂದಿ ರಾಷ್ಟ್ರಭಾಷೆಯಾಗಬೇಕಿಲ್ಲವೆಂದಿದ್ದಾರೆ.[34] ಮಾಸ್ತಿಯವರು ರಾಜಕೀಯ ಕಾರ್ಯಕ್ಕಾಗಿ ಬೇಕಾದಷ್ಟು ಹಿಂದೀ ಕಲಿಯಬೇಕು – ಎನ್ನುತ್ತಾರೆ. ರಾಷ್ಟ್ರೀಯ ಚಳವಳಿ ವ್ಯಾಪಕವಾದಂತೆ ಹಿಂದಿ ಕೂಡ ಭಾರತದ ಎಲ್ಲೆಡೆ ಸ್ವೀಕೃತವಾಗುತ್ತ ಬಂತು. ಆದರೂ, ಕನ್ನಡ ಭಾಷೆಯನ್ನು ಉಳಿಸುವ ದೃಷ್ಟಿಯಿಂದ ಬಹಳ ಮಂದಿ ವಿದ್ವಾಂಸರು ಅದನ್ನು ಪ್ರಬಲವಾಗಿ ವಿರೋಧಿಸಿದರು. ದಿವಾಕರ ರಂಗರಾಯರು, ''ಹಿಂದುಸ್ಥಾನಿಯನ್ನು ಎಷ್ಟು, ಹೇಗೆ ಕಲಿಸಬೇಕು ಎಂಬ ಬಗ್ಗೆ ವಾದವಿದೆ. ಪರ ಪ್ರಾಂತ್ಯದೊಡನೆ ಸಂಬಂಧ ಬರುವವರು ಮಾತ್ರ ಅದನ್ನು ಕಲಿಸಬೇಕು, ಇತರರು ಕಲಿಯುವುದು ಅವಶ್ಯವಿಲ್ಲ, ಅದನ್ನು ಒತ್ತಾಯದಿಂದ ಕಲಿಯಬಾರದು ಎಂಬ ಮುಂತಾದ ಆಕ್ಷೇಪಗಳು ನಮ್ಮ ಮುಂದೆ ಬರುತ್ತಿವೆ. ವ್ಯಾವಹಾರಿಕ ಸಂಭಾಷಣೆಯ ಪೂರ್ತಿಯೇ ಹಿಂದೂಸ್ಥಾನಿಯನ್ನು ಕಲಿಸಿದರೆ ಹಾಗೂ ಪರೀಕ್ಷೆಯ ದೃಷ್ಟಿಯಿಂದ ಒತ್ತಾಯ ಮಾಡದಿದ್ದರೆ ಈ ಆಕ್ಷೇಪಗಳ ಬಲವೂ ಕಡಮೆಯಾಗುವುದು. ಪ್ರಾಂತಿಕ ಭಾಷೆ ಕುಗ್ಗದಂತೆ ಎಚ್ಚರಪಡುವುದು ಎಲ್ಲರ ಕರ್ತವ್ಯವೇ ಇರುವದು.'' ಎನ್ನುತ್ತಾರೆ.[35]

ಎನ್.ಎಸ್. ಸುಬ್ಬರಾಯರು ಹಿಂದಿಯನ್ನು ಸ್ವೀಕರಿಸುವುದಕ್ಕಿಂತ, ಇಂಗ್ಲಿಷನ್ನೇ

ಭಾರತದ ಸಂಪರ್ಕ ಭಾಷೆಯನ್ನಾಗಿ ಮಾಡುವುದರಿಂದ ಅನುಕೂಲ ಹೆಚ್ಚೆಂದು ಅಭಿಪ್ರಾಯ ಪಡುತ್ತಾರೆ. ಕನ್ನಡವೇ ದುಸ್ಥಿತಿಯಲ್ಲಿರುವಾಗ ಹಿಂದಿಯನ್ನು ಪೋಷಿಸುವುದು ನಮ್ಮ ಭಾಷೆಯ ಬೆಳವಣಿಗೆಗೆ ಅಡ್ಡಿಯಾದೀತೆಂದೂ ಅವರು ಹೇಳುತ್ತಾರೆ. ಆದರೂ ''ಸಾಮಾಜಿಕ ಜೀವನದ ಇತರ ವಿಷಯಗಳಂತೆ ಇದರಲ್ಲಿಯೂ ಬಹುಜನರ ನಿರ್ಧಾರ ದಂತೆಯೇ ತೀರ್ಮಾನವಾಗತಕ್ಕದ್ದು ಸಹಜ. ಆದ್ದರಿಂದ ಹಿಂದುಸ್ಥಾನದಲ್ಲಿ ಆಗುವ ಸಂಸ್ಕೃತಿಯ ಚಳವಳಿಗಳೊಂದಿಗೆ ನಾವು ಸರಿಸಮವಾಗಿ ನಡೆಯಲು ಹಿಂದೀ ಭಾಷೆಯನ್ನು ಬಿಟ್ಟು ಬೇರೆ ಭಾಷೆಯನ್ನು ಹುಡುಕುವ ಅವಶ್ಯಕತೆಯಿಲ್ಲ'' ಎಂದು ಹಿಂದಿಯನ್ನು ಹೆಚ್ಚುಕಡಿಮೆ ಸ್ವೀಕರಿಸುತ್ತಾರೆ.[36]

ಮುಂದುವರಿದು ಕೃಷ್ಣರಾಯರು, ಪರಕೀಯ ಭಾಷೆಯಾದ ಇಂಗ್ಲಿಷಿನ ಬದಲು ಹಿಂದೀ ಬರತಕ್ಕದ್ದು ಯೋಗ್ಯವಾಗಿದೆ ಎಂದೂ, ಅದನ್ನು ಜನತೆಯೆಲ್ಲ ಕಲಿತೇ ತೀರಬೇಕೆಂಬ ಹಟ ನ್ಯಾಯವಲ್ಲ — ಎಂದೂ ಹೇಳುತ್ತಾರೆ.[37]

ಆರಂಭದಲ್ಲಿ ರಾಷ್ಟ್ರಭಾಷೆಯೆಂದು ಹಿಂದಿಯನ್ನು ಹೆಚ್ಚಿನವರು ಸ್ವೀಕರಿಸಿದ್ದರೂ, ರಾಷ್ಟ್ರೀಯ ಏಕತೆಗಾಗಿ ಎಲ್ಲರೂ ಅದನ್ನು ಕಲಿಯುವ ಅವಶ್ಯಕತೆಯಿಲ್ಲವೆಂಬುದನ್ನು ಅವರೆಲ್ಲ ಅರಿತೇ ಇದ್ದರು. ಹಿಂದೀ ಹೇರಿಕೆಯ ಸಾಧ್ಯತೆ ಮತ್ತು ಅದರಿಂದಾಗುವ ಹಾನಿಯ ಬಗೆಗಿನ ಅರಿವು ಹೆಚ್ಚಿನವರಿಗಿತ್ತು. ಆದರೂ ಕನ್ನಡದ ಬೆಳವಣಿಗೆಗಾಗಿ ದುಡಿದವರಲ್ಲಿ ಕೆಲವರು ಸ್ವಾತಂತ್ರ್ಯ ಚಳವಳಿಯ ಸೆಳೆತದಿಂದ ಹಿಂದಿಯ ಕಡೆಗೂ, ಇನ್ನು ಕೆಲವರು ಸರಕಾರೀ ಉದ್ಯೋಗದಲ್ಲಿದ್ದುದರಿಂದ ಹಿಂದಿಯ ಕಡೆಗೆ ಅಷ್ಟು ಒಲವಿಲ್ಲದೆಯೂ ಕನ್ನಡಕ್ಕೆ ಪ್ರಾಧಾನ್ಯತೆಯನ್ನು ನೀಡಿದರು. ಆದರೆ, ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಂಡುಬಂದ ತೀವ್ರ ಹಿಂದೀ ವಿರೋಧ ಇಲ್ಲೆಲ್ಲೂ ಅಷ್ಟಾಗಿ ಕಾಣುವುದಿಲ್ಲ. ಈ ಎರಡು ಬಗೆಯ ಸೂಕ್ಷ್ಮ ನಿಲುವಿನಿಂದ ಅವರ ಇಂಗ್ಲಿಷ್-ಕನ್ನಡ ಸಂಬಂಧದ ಕುರಿತ ಚಿಂತನೆಯಲ್ಲಿ ಉಂಟಾಗಿ ರುವ ವ್ಯತ್ಯಾಸದ ಎಳೆಯನ್ನು ಗುರುತಿಸಬಹುದು.

1) ಇಂಗ್ಲಿಷ್ ಆಧುನಿಕ ವಿಜ್ಞಾನಕ್ಕೆ — ಹಾಗೂ ಪಾಶ್ಚಾತ್ಯ ಸಂಪರ್ಕಕ್ಕೆ ಮಾತ್ರ ಅಗತ್ಯ; ದೇಶದೊಳಗಿನ ವ್ಯವಹಾರಕ್ಕೆ ಅನಗತ್ಯ.

2) ಇಂಗ್ಲಿಷ್ ಆಧುನಿಕ ವಿಜ್ಞಾನಕ್ಕೂ, ರಾಷ್ಟ್ರೀಯ – ಅಂತರರಾಷ್ಟ್ರೀಯ ಸಂಪರ್ಕಕ್ಕೂ ಇರಲಿ; ಹಿಂದಿಗಿಂತ ಇದೇ ಅನುಕೂಲ.

ಮಾಸ್ತಿ, ದಿವಾಕರ ರಂಗರಾಯರು, ಮುದವೀಡು ಕೃಷ್ಣರಾಯರು ಮೊದಲಾದವರು ಒಂದನೇ ಅಭಿಪ್ರಾಯದವರು; ಬಿ.ಎಂ.ಶ್ರೀ., ಎನ್.ಎಸ್. ಸುಬ್ಬರಾಯರು – ಎರಡನೇ ಅಭಿಪ್ರಾಯದವರು.

## 7. ಭಾಷೆಗಳ ಸ್ಥಾನಮಾನ

ಜನಜೀವನದಲ್ಲಿ, ಅದರಲ್ಲೂ ಮುಖ್ಯವಾಗಿ ಶಿಕ್ಷಣದಲ್ಲಿ ಭಾಷೆಗಳ ಸ್ಥಾನಮಾನವನ್ನು ಕುರಿತ ಆಲೋಚನೆ ಬಹಳ ಮಹತ್ವದ್ದಾಗುತ್ತದೆ. ಇಂಥ ಚಿಂತನೆಗಳನ್ನು ಅವಲಂಬಿಸಿಯೇ ರಾಷ್ಟ್ರದ ಅಥವಾ ರಾಜ್ಯದ ಭಾಷಾನೀತಿಯನ್ನು ರೂಪಿಸಬೇಕಾಗುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡ ಚಿಂತಕರು ಭಾಷೆಗಳ ಸ್ಥಾನಮಾನಗಳನ್ನು ನಿರ್ದೇಶಿಸಿದ್ದು ಕೇವಲ ಕರ್ನಾಟಕಕ್ಕೆ ಮಾತ್ರ ಸಂಬಂಧಿಸಿ ಅಲ್ಲ. ಒಟ್ಟು ಭಾರತೀಯ ಸಂದರ್ಭವನ್ನು ಗಮನದಲ್ಲಿಟ್ಟುಕೊಂಡು ಅವರು ಚಿಂತಿಸಿದ್ದಾರೆ. ಆಗಿನ ಪರಿಸ್ಥಿತಿ ಹಾಗೂ ಅವರ ಚಿಂತನೆಯು ಕ್ರಮ ಭಾಷಾಸಮಸ್ಯೆಯ ಪ್ರಶ್ನೆಗೆ ಯಾವ ಯಾವ ಬಗೆಯ ಉತ್ತರಗಳನ್ನು ಕಂಡುಕೊಂಡಿತು – ಎಂಬುದು ಇಲ್ಲಿ ಬಹಳ ಮುಖ್ಯ.

ಅ) ಬಿ.ಎಂ.ಶ್ರೀ: ಸ್ಪಷ್ಟವಾಗಿ 'ಕನ್ನಡನಾಡಿಗೆ ಕನ್ನಡವೇ ಗತಿ'[38] ಎಂದು ದೇಶಭಾಷೆಗೆ ಮೊದಲ ಸ್ಥಾನ ನೀಡುತ್ತಾರೆ. ಮುಂದಿನ ಸ್ಥಾನವನ್ನು ಇಂಗ್ಲಿಷ್ ಹಾಗೂ ಸಂಸ್ಕೃತಕ್ಕೆ ಕೊಡುತ್ತಾರೆ.[39] ಅನಂತರ, 'ಸಂಸ್ಕೃತದಲ್ಲಿಯೂ ಇಂಗ್ಲಿಷಿನಲ್ಲಿಯೂ ಸಿಕ್ಕದ್ದು ಹಿಂದಿಯಲ್ಲೇನಾದರೂ ಸಿಕ್ಕಿದರೆ ಅದನ್ನೂ ಕೊಳ್ಳಿ' ಎಂದು ಅಭಿಪ್ರಾಯ ಪಡುತ್ತಾರೆ.[40]

ಇಲ್ಲಿ ಗಮನಿಸಬಹುದಾದದ್ದು ಇಷ್ಟು: ಶ್ರೀಯವರಲ್ಲಿ ಕನ್ನಡವನ್ನು ಬೆಳೆಸುವ, ಅದಕ್ಕಾಗಿ ಜನರಲ್ಲಿ ಕನ್ನಡಾಭಿಮಾನವನ್ನು ಮೂಡಿಸುವ ಪ್ರಯತ್ನವಿತ್ತು. ಭಾಷಾ

ಸಮಸ್ಯೆಗಳು ಹಾಗೂ ಸಮಕಾಲೀನ ಸಮಸ್ಯೆಗಳ ಕುರಿತು ಸ್ಪಷ್ಟ ಅರಿವಾ ಇತ್ತು. ಆದ್ದರಿಂದ ಅವರು ಕನ್ನಡಕ್ಕೆ ಪ್ರಥಮ ಸ್ಥಾನವನ್ನು ಕೊಟ್ಟಿರುವುದು ತೀರ ಸಹಜ. ಇಂಗ್ಲಿಷ್ ಕುರಿತು ಅವರ ನಿಲುವು ಸಮಕಾಲೀನ ಅವಶ್ಯಕತೆಗಳಾದ ಪ್ರಾಂತ - ಪ್ರಾಂತಗಳ ನಡುವಿನ ವ್ಯವಹಾರ, ಪಾಶ್ಚಾತ್ಯ ಜ್ಞಾನ-ವಿಜ್ಞಾನಗಳ ಶಿಕ್ಷಣ ಹಾಗೂ ಸಂಶೋಧನೆಗೆ ಅಗತ್ಯವಾದ ಭಾಷೆ - ಎನ್ನುವುದಕ್ಕಿಂತ ಹೆಚ್ಚಾಗಿ ಸಾಹಿತ್ಯಕವಾಗಿ ಸಮೃದ್ಧವಾದ ಭಾಷೆ ಎಂಬುದಾಗಿತ್ತು. ಅದಕ್ಕೆ ಸಮಾನವಾಗಿ ಸಂಸ್ಕೃತ ಭಾಷೆಯು ಜ್ಞಾನಸಂಪತ್ತಿಗೂ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಕನ್ನಡದ ಬೆಳವಣಿಗೆಯಲ್ಲಿ ಈ ಎರಡು ಭಾಷೆಗಳ ಅಗತ್ಯವನ್ನು ಮನಗಂಡಿದ್ದಾರೆ. ಹಿಂದಿಯ ಬಗೆಗೆ 'ಶ್ರೀ' ಯವರ ನಿಲುವು, ಅದು ಅಷ್ಟೊಂದು ಅವಶ್ಯಕವಲ್ಲ - ಎಂದೇ ಆಗಿತ್ತು.[41] ಇದಕ್ಕೆ ಕಾರಣ ಬಹುಶಃ ಒಂದು ರಾಷ್ಟ್ರಕ್ಕೆ ಒಂದೇ ಭಾಷೆಯಾಗಿರಬೇಕೆಂಬ ವಾದವನ್ನು ಅವರು ಒಪ್ಪದಿದ್ದುದು ಮತ್ತು ಇಂಗ್ಲಿಷ್-ಸಂಸ್ಕೃತಗಳಲ್ಲಿ ದೊರೆಯುವಷ್ಟು ಸಮೃದ್ಧ ಜ್ಞಾನ ಹಿಂದಿಯಲ್ಲಿ ದೊರಕಲಾರದು ಎಂಬುದೇ ಆಗಿದ್ದಿರಬೇಕು. ಆಡಳಿತ, ಶಿಕ್ಷಣ, ಅಂತರರಾಜ್ಯ - ಅಂತರರಾಷ್ಟ್ರೀಯ ಸಂಪರ್ಕಗಳಿಗೆ ಯಾವ ಯಾವ ಭಾಷೆಗಳು ಅಗತ್ಯ, ಎಷ್ಟೆಷ್ಟು ಅಗತ್ಯ - ಎಂಬ ವಿಷಯಗಳನ್ನು ಅವರು ಅಷ್ಟಾಗಿ ಬಿಡಿಸಿ ಹೇಳುವುದಿಲ್ಲ. ಒಟ್ಟಿನಲ್ಲಿ: ಕನ್ನಡ, ಸಂಸ್ಕೃತ - ಇಂಗ್ಲಿಷ್, ಅನಂತರ ಹಿಂದಿ - ಈ ಕ್ರಮದಲ್ಲಿ ಅವರು ಭಾಷೆಗಳಿಗೆ ಸ್ಥಾನ ಕಲ್ಪಿಸುತ್ತಾರೆ ಅಷ್ಟೆ. ಮೈಸೂರು ಅರಸರಿಗೆ ಅವರು ನಿಷ್ಠರಾಗಿದ್ದುದರಿಂದ ರಾಷ್ಟ್ರಭಾಷೆ ಅಥವಾ ರಾಜಭಾಷೆ ಈಗ ಇಂಗ್ಲಿಷ್ - ಎನ್ನುವ ಶ್ರೀಯವರು, ಆ ಸ್ಥಾನದಿಂದ ಅದು ಹೋಗಬೇಕು ಎಂದೇನೂ ಹೇಳುವುದಿಲ್ಲ. ಆದರೆ ಆಡಳಿತ ಭಾಷೆ ಕನ್ನಡವಾಗಬೇಕು - ಎಂಬ ಅಭಿಪ್ರಾಯ ಅವರದಾಗಿತ್ತು ಎನ್ನುವುದು ಸ್ಪಷ್ಟವೇ ಆಗಿದೆ.[42]

ಆ) <u>ಎಚ್.ವಿ. ನಂಜುಂಡಯ್ಯನವರು</u>: ಕನ್ನಡವೇ ಆಡಳಿತ, ವ್ಯಾಪಾರ -ವಾಣಿಜ್ಯ ನ್ಯಾಯಾಲಯ ಹಾಗೂ ವಿದ್ಯಾಭ್ಯಾಸದಲ್ಲಿ ಇರತಕ್ಕ ಭಾಷೆಯಾಗಿದೆ; ಅದಕ್ಕಾಗಿ ಕನ್ನಡವನ್ನು ಬೆಳೆಸುವ ಅವಶ್ಯಕತೆ ಇದೆ; ಇಂಗ್ಲಿಷ್ ಕೆಲವರಿಗೆ ಮಾತ್ರ ಅಗತ್ಯವಿದೆ - ಎನ್ನುತ್ತಾರೆ. ದೇಶಭಾಷೆಗೆ ಎಲ್ಲ ಕ್ಷೇತ್ರಗಳಲ್ಲೂ ಪ್ರಮುಖ ಸ್ಥಾನವನ್ನು ಕೊಟ್ಟಿದ್ದಾರೆ, ಆದರೆ ಅದಕ್ಕೆ ಕಾರಣಗಳನ್ನೂ, ಹಾಗೆ ಸ್ಥಾನ ಪಡೆಯಲು ಇರುವ ತೊಂದರೆಗಳನ್ನೂ, ಅವುಗಳಿಗೆ ಪರಿಹಾರವನ್ನೂ ಸಂದೇಹಕ್ಕೆಡೆಯಿಲ್ಲದೆ ಸೂಚಿಸಿದ್ದಾರೆ. ಕನ್ನಡ ಭಾಷೆಯನ್ನು ಎಲ್ಲೆಡೆ

ಬಳಸಲು ಕನ್ನಡದಲ್ಲಿ ಗ್ರಂಥರಚನೆಯಾಗಬೇಕಾದದ್ದರ ಕುರಿತು ಹಾಗೂ ಭಾಷಾಂತರ ಕಾರ್ಯದಲ್ಲಿ ಪಾರಿಭಾಷಿಕ ಪದಗಳ ನಿರ್ಮಾಣದ ಕುರಿತು ಅವರು ಹೇಳುವ ವಿಚಾರಗಳು ಗಮನಾರ್ಹವಾಗಿವೆ.[43]

ಇ) <u>ಕೆ.ಪಿ. ಪುಟ್ಟಣ್ಣಶೆಟ್ಟರು</u>: ಆಡಳಿತ, ನ್ಯಾಯಾಲಯ, ಶಿಕ್ಷಣಗಳಲ್ಲಿ ಕನ್ನಡಕ್ಕೇ ಪ್ರಥಮ ಸ್ಥಾನ; ಇಂಗ್ಲಿಷ್ ಅಭ್ಯಾಸ ಕೆಲವರಿಗೆ ಅವಶ್ಯಕ; ಅದರಿಂದ ಕನ್ನಡಕ್ಕೆ ಪ್ರಯೋಜನವಿದೆ; ಆದರೆ ಸರಕಾರಿ ಉದ್ಯೋಗ ಸಂಪಾದಿಸಲು ಇಂಗ್ಲಿಷನ್ನೇ ಓದುವಂತಾಗಿ, ಕನ್ನಡವನ್ನು ಮೂಲೆಗೆ ತಳ್ಳುವುದು ಸರಿಯಲ್ಲ.[44] ಸ್ಪಷ್ಟವಾಗಿ, ಪುಟ್ಟಣ್ಣಶೆಟ್ಟರ ಅಭಿಪ್ರಾಯದಲ್ಲಿ —

ಅ) ಕನ್ನಡಕ್ಕೆ ಪ್ರಥಮ ಸ್ಥಾನ

ಆ) ಇಂಗ್ಲಿಷಿಗೆ ನಂತರದ ಸ್ಥಾನ

— ಎಂಬ ವಿಭಾಗ ಕಾಣಿಸುತ್ತದೆ.

ಈ) <u>ಮಾಸ್ತಿ</u>: 1) ಕನ್ನಡವೇ ವಿದ್ಯಾಭ್ಯಾಸ, ಆಡಳಿತದ ಭಾಷೆಯಾಗಬೇಕು. (ಒಂದು ಪ್ರದೇಶದ ನೂರಕ್ಕೆ 60—70 ರಷ್ಟು ಜನ ಯಾವ ಭಾಷೆಯವರೋ, ಆ ಭಾಷೆಯಲ್ಲಿ ವಿದ್ಯಾಭ್ಯಾಸ ಕೊಡಬೇಕು. ಉಳಿದ ಮೂವತ್ತು — ನಲವತ್ತರಷ್ಟು ಜನರಲ್ಲಿ ಅನೇಕರಿಗೆ ಆ ಅರವತ್ತು ಎಪ್ಪತ್ತು ಜನರ ಸಹವಾಸದಲ್ಲಿ ಅವರ ಮಾತು ತಕ್ಕ ಮಟ್ಟಿಗೆ ಬಂದೇ ಇರುತ್ತದೆ. ಆ ಭಾಷೆಯನ್ನು ಕಲಿಯಲು ಅವರಿಗೆ ಕಷ್ಟವಾಗದು.[45])

2) ವಿಶಾಲ ಪ್ರಪಂಚದ ಜೀವನದೊಂದಿಗೆ ಸಂಬಂಧ ವನ್ನುಂಟುಮಾಡುವ ಇನ್ನೊಂದು ಭಾಷೆಯನ್ನು ತಕ್ಕಮಟ್ಟಿಗೆ ಕಲಿಯಬೇಕು. ಈಗ ಅದು ಇಂಗ್ಲಿಷ್.

3) ಇಂಗ್ಲಿಷ್, ಸಂಸ್ಕೃತ, ನೆರೆಹೊರೆಯ ಭಾಷೆಗಳು, ಇತರ ಭಾರತೀಯ ಭಾಷೆಗಳು — ಇವೆಲ್ಲವನ್ನೂ ಕನ್ನಡ ಭಾಷೆಯ ಬೆಳವಣಿಗೆಗಾಗಿ ಉಪಯೋಗಿಸಬೇಕು. ಅವುಗಳಿಗೇ

ಪ್ರಾಮುಖ್ಯತೆ ಎಂದೂ ನೀಡಬಾರದು.

4) ರಾಜಕೀಯ ಕಾರ್ಯಕ್ಕಾಗಿ ಬೇಕಾದಷ್ಟು ಹಿಂದೀ ಕಲಿಯಬೇಕು.

ಪ್ರಾದೇಶಿಕ ಭಾಷೆ; ಸಂಪರ್ಕಕ್ಕಾಗಿ ಇಂಗ್ಲಿಷ್; ಕನ್ನಡದ ಬೆಳವಣಿಗೆಗೆ ಸಹಾಯಕ ವಾಗಬಲ್ಲ ಭಾಷೆಗಳು; ಹಿಂದಿ — ಈ ಕ್ರಮದಲ್ಲಿ ಭಾಷೆಗಳಿಗೆ ಸ್ಥಾನ ಕಲ್ಪಿಸಿದ್ದಾರೆ. ಇಲ್ಲಿ ಅವಶ್ಯಕತೆಗೆ ಮತ್ತು ಸಮಕಾಲೀನ ಪರಿಸ್ಥಿತಿಗಳಿಗೆ ಹೊಂದುವಂತೆ ಭಾಷೆಗಳಿಗೆ ನೀಡಬೇಕಾದ ಸ್ಥಾನಮಾನವನ್ನು ಕುರಿತು ಮಾಸ್ತಿಯವರು ಚಿಂತಿಸಿದ್ದು ಗಮನಾರ್ಹ. ಹಾಗೆ ಚಿಂತಿಸುವಾಗ ಜನರ ಬೆಳವಣಿಗೆ, ಕನ್ನಡ ಭಾಷೆ ಹಾಗೂ ನಾಡಿನ ಅಭಿವೃದ್ಧಿ, ಒಟ್ಟು ಭಾರತದ ಕ್ಷೇಮ — ಇವು ಅವರ ಹಿನ್ನೆಲೆಯಲ್ಲಿದೆ. ಭಾವನೆಗಳಿಗಿಂತ ವಾಸ್ತವಿಕ ದೃಷ್ಟಿ ಕೋನ ಇವರ ಚಿಂತನೆಯಲ್ಲಿ ಮುಖ್ಯವಾಗಿದೆ.

ಉ) <u>ಡಿ.ವಿ.ಜಿ.</u>:

1) ವಿದ್ಯಾಭ್ಯಾಸದಲ್ಲಿ ಅಗ್ರಸ್ಥಾನ — ಕನ್ನಡಕ್ಕೆ.[46] ಆಡಳಿತದಲ್ಲಿ ಕನ್ನಡಕ್ಕೆ ಪ್ರಾಧಾನ್ಯ.

2) ಇಂಗ್ಲಿಷ್, ಸಂಸ್ಕೃತಗಳು ಕನ್ನಡದ ಸ್ವಭಾವ ವಿಕಾಸಕ್ಕೆ ಉಪಕಾರಕವಾಗಲಿ.[47]

3) ಕನ್ನಡದ ಬಲವನ್ನು ಹೆಚ್ಚಿಸಲು ಹಿಂದಿ, ಮರಾಠಿ, ಬಂಗಾಳಿ ಭಾಷೆಗಳೂ ಬೇಕು.[48]

4) ಕನ್ನಡನಾಡಿನವನು ಮೊದಲು ಕನ್ನಡ ಕಲಿಯಬೇಕು. ಆಮೇಲೆ ಹೊರಗಿನ ವ್ಯವಹಾರಕ್ಕಾಗಿ ಇಂಗ್ಲಿಷ್ ಕಲಿಯಲಿ. ಅದು ಸಾಧ್ಯವಾಗದಿದ್ದರೆ ಹಿಂದೀ ಕಲಿಯಲಿ.[49]

ಡಿ.ವಿ.ಜಿ. ಯವರು ಕನ್ನಡಕ್ಕೆ ಮೊದಲ ಸ್ಥಾನ ಕೊಡಬೇಕಾದುದಕ್ಕೆ ಕಾರಣ ವನ್ನು ಕೊಡುತ್ತಾರೆ, ''ಮನುಷ್ಯನು ಕಲಿಯಬೇಕೆನ್ನುವ ಭಾಷೆಗಳು ಎಷ್ಟೇ ಆಗಿದ್ದರೂ ಅವೆಲ್ಲಕ್ಕೂ ಸಾಧಕವಾದ ಬುದ್ಧಿಶಕ್ತಿ ಒಂದೇ ಆಗಿರುತ್ತದೆ. ಅದನ್ನು ವ್ಯಾಕರಣ ಶಕ್ತಿ

ಯೆನ್ನಬಹುದು. ಆ ಅಂತರಂಗಶಕ್ತಿಯನ್ನು ಶಿಕ್ಷಿಸಿ ಪೋಷಿಸಿದರೆ ಅದು ಯಾವ ಭಾಷೆಗೆ ಬೇಕಾದರೂ ಒದಗಿಬರುವುದು. ಆದರೆ ಅದರ ಶಿಕ್ಷಣ ಪೋಷಣಗಳು ಮಾತ್ರ ದೇಶಭಾಷೆಯಲ್ಲಿ ನಡೆಯುವಷ್ಟು ಚೆನ್ನಾಗಿ ಮತ್ತಾವ ಭಾಷೆಯಲ್ಲೂ ನಡೆಯಲಾರವು. ಕನ್ನಡ ವ್ಯಾಕರಣದ ಸ್ವರೂಪವನ್ನೂ ಮರ್ಮವನ್ನೂ ಅರಿತುಕೊಂಡವನಿಗೆ ಇಂಗ್ಲಿಷಿನ ವ್ಯಾಕರಣವನ್ನು ಸಾಧಿಸಲು ಹೆಚ್ಚಿನ ಪ್ರಯಾಸ ಬೇಕಾಗಲಾರದು.."[50]

(ಊ) <u>ಎನ್.ಎಸ್. ಸುಬ್ಬರಾಯರು</u> : ಶೈಕ್ಷಣಿಕವಾಗಿ ಭಾಷೆಗಳಿಗೆ ಸಲ್ಲಬೇಕಾದ ಸ್ಥಾನವನ್ನು ಇವರು ಹೀಗೆ ನಿರ್ದೇಶಿಸಿದ್ದಾರೆ.[51]

1) ಶಾಲೆ, ಕಾಲೇಜುಗಳಲ್ಲಿ ಕನ್ನಡಕ್ಕೆ ಪ್ರಥಮ ಸ್ಥಾನ. ಹಿಂದಿ ಆ ಸ್ಥಾನವನ್ನು ಆಕ್ರಮಿಸಲಾರದು.

2) ಇಂಗ್ಲಿಷಿಗೆ ಸೆಕೆಂಡರಿ, ಕಾಲೇಜುಗಳಲ್ಲಿ ಪ್ರಥಮ ಸ್ಥಾನವಿದೆ.

3) ಸೆಕೆಂಡರಿ, ಕಾಲೇಜುಗಳಲ್ಲಿ ದ್ವಿತೀಯ ಭಾಷೆಯಾಗಿ ಸಂಸ್ಕೃತ, ಅರೇಬಿಕ್ ಭಾಷೆಗಳನ್ನು ಕಲಿಸಬಹುದು.

4) ಶಿಕ್ಷಣದಲ್ಲಿ ಇಂಗ್ಲಿಷಿಗೆ ಬದಲಾಗಿ ಹಿಂದಿಯನ್ನು ತರುವುದು ಬೇಡ. ಅದನ್ನು ಐಚ್ಛಿಕವಾಗಿ ಕಲಿಯಬಹುದು. ಅದು ಸಾಂಸ್ಕೃತಿಕ ಚಳವಳಿಗೆ ಅಗತ್ಯ.[52]

ಪ್ರಾಂತಗಳೊಳಗಿನ ಸಂಪರ್ಕಕ್ಕಾಗಿ ಒಂದು ಭಾಷೆಯ ಅಗತ್ಯವನ್ನು ಹೇಳುತ್ತ, ಅದಕ್ಕೆ ಹಿಂದೀ ಬೇಕಿಲ್ಲ; ಇಂಗ್ಲೀಷೇ ಇದೆ — ಎನ್ನುತ್ತಾರೆ. ಇದು ಹೇಗೂ ಆಡಳಿತ, ಶಿಕ್ಷಣದಲ್ಲಿ ಬಂದಿರುವುದರಿಂದ ಹಾಗೂ ಅಂತರರಾಷ್ಟ್ರೀಯ ವ್ಯವಹಾರ ಅದರಿಂದ ಸಾಧ್ಯವಾಗುವುದರಿಂದ ಅದನ್ನೇ ಸ್ವೀಕರಿಸಬೇಕು — ಎನ್ನುತ್ತಾರೆ.[53] ಇದರಿಂದ ಎನ್.ಎಸ್. ಸುಬ್ಬರಾಯರ ಪ್ರಕಾರ ಭಾಷೆಗಳ ಸ್ಥಾನಮಾನ ಹೀಗಿರಬೇಕು:

1) ಕನ್ನಡಕ್ಕೆ ಮೊದಲನೇ ಸ್ಥಾನ

2) ಇಂಗ್ಲಿಷಿಗೆ ಎರಡನೇ ಸ್ಥಾನ

3) ಸಂಸ್ಕೃತ, ಅರೇಬಿಕ್‌ಗಳಿಗೆ ಮೂರನೇ ಸ್ಥಾನ

4) ಹಿಂದಿಗೆ ನಾಲ್ಕನೇ ಸ್ಥಾನ

ಪ್ರಾದೇಶಿಕ ಭಾಷೆಗೆ ಮೊದಲ ಸ್ಥಾನ ಕೊಡುವಲ್ಲಿ ಇವರು ಶೈಕ್ಷಣಿಕ ಉದ್ದೇಶವನ್ನೇ ಮುಖ್ಯವಾಗಿ ಇಟ್ಟುಕೊಂಡಿದ್ದಾರೆ.

ಖ) <u>ಬೆಳ್ಳಾವೆ ವೆಂಕಟನಾರಣಪ್ಪ</u> :

1) ಹದಿನಾಲ್ಕು ವರ್ಷದವರೆಗೆ ಶಿಕ್ಷಣದಲ್ಲಿ ಮಾತೃಭಾಷೆ ಮಾತ್ರ ಸಾಕು.

2) ಪ್ರಪಂಚದ ವ್ಯವಹಾರಕ್ಕೆ ಬೇಕಾದಷ್ಟು ಇಂಗ್ಲಿಷ್ ಕಲಿಯಬೇಕು.

3) ಹಿಂದಿ, ಸಂಸ್ಕೃತ ಕಡ್ಡಾಯ ಕೂಡದು; ಐಚ್ಛಿಕವಾಗಿರಬೇಕು.

ಗಾಂಧೀಜಿಯವರ – ವರ್ಧಾ ಶಿಕ್ಷಣ ಪದ್ಧತಿಯನ್ನು ಒಪ್ಪಿಕೊಂಡಿರುವ ಬೆಳ್ಳಾವೆಯವರು ಮಾತೃಭಾಷೆಗೆ ಬಹಳ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ.[54]

ಖಾ) <u>ದಿವಾಕರ ರಂಗರಾಯರು</u> : ನಮಗೆ ಸಂಪರ್ಕಕ್ಕೆ ಬರುವ ವಿವಿಧ ಭಾಷೆಗಳಿಗೆ ನಾವು ಕೊಡಬೇಕಾದ ಸ್ಥಾನವನ್ನು ದಿವಾಕರ ರಂಗರಾಯರು ಕ್ರಮಬದ್ಧವಾಗಿ ಗಮನಿಸುತ್ತಾರೆ:[55]

1) ಪ್ರಾದೇಶಿಕ ಅಥವಾ ಪ್ರಾಂತಿಕ ಭಾಷೆಗೆ ಪ್ರಾಧಾನ್ಯತೆ.

2) ಪ್ರಾಂತಭಾಷೆಗೆ ಹಾನಿ ತಟ್ಟದಂತೆ ಅಲ್ಪಸಂಖ್ಯಾಕಭಾಷೆಗಳಿಗೆ (ಅದನ್ನಾಡುವವರ ಸಂಖ್ಯೆ ಸಾಕಷ್ಟು ಇದ್ದಲ್ಲಿ) ಸ್ಥಾನವಿರಬೇಕು.

3) ವ್ಯಾವಹಾರಿಕವಾಗಿ ಸರ್ವಸಾಮಾನ್ಯವಾಗಿ ಹಿಂದಿ ತಿಳಿಯಬೇಕು.

4) ಅಂತರರಾಷ್ಟ್ರೀಯ ವ್ಯವಹಾರ ಮತ್ತು ವೈಜ್ಞಾನಿಕ ಶಿಕ್ಷಣಕ್ಕೆ ಇಂಗ್ಲಿಷ್ ಬೇಕು.

5) ಪೂರ್ವಸಂಸ್ಕೃತಿಯ ಅಧ್ಯಯನಕ್ಕೆ, ಭಾಷಾಶಾಸ್ತ್ರವನ್ನು ಅಭ್ಯಸಿಸು ವರಿಗೆ ಸಂಸ್ಕೃತ ಬೇಕು.

ಪ್ರಾಂತಭಾಷೆಯನ್ನು ಮಾತೃಭಾಷೆ ಎಂದು ಸರಳೀಕರಿಸುವುದಕ್ಕೆ ಬದಲಾಗಿ, ಒಂದು ಪ್ರದೇಶದಲ್ಲಿ ವಿವಿಧ ಭಾಷೆಗಳನ್ನಾಡುವವರು ಇರುವುದನ್ನು ಗಮನದಲ್ಲಿರಿಸಿಕೊಂಡು, ಮನೆಮಾತು ( = ಮಾತೃಭಾಷೆ) ಹಾಗೂ ಪ್ರಾಂತಭಾಷೆ — ಎಂದು ಬೇರೆ ಬೇರೆಯಾಗಿ ದಿವಾಕರರು ನೋಡುತ್ತಾರೆ. ಇದರಿಂದ ಭಾಷಾಅಲ್ಪಸಂಖ್ಯಾತರ ಸಮಸ್ಯೆಯನ್ನೂ, ಭೌಗೋಳಿಕ ಭಾಷಾ ಕಲ್ಪನೆಯ ಮಿತಿಯನ್ನೂ ಗಮನಿಸುವುದು ಇಲ್ಲಿ ಸಾಧ್ಯವಾಗಿದೆ. ಇದರೊಂದಿಗೆ, ಹಿಂದಿ, ಇಂಗ್ಲಿಷ್, ಸಂಸ್ಕೃತ — ಈ ಭಾಷೆಗಳಿಗೆ ಅವುಗಳ ಬೇರೆ ಬೇರೆ ಉದ್ದೇಶಗಳಿಗನುಸಾರವಾಗಿ ಯೋಗ್ಯಸ್ಥಾನ ಮಾನಗಳನ್ನು ಕಲ್ಪಿಸಿರುವುದು ಗಮನ ಸೆಳೆಯುವ ಅಂಶವಾಗಿದೆ. ವಸ್ತುಸ್ಥಿತಿಯನ್ನೂ, ಅವಶ್ಯಕತೆಯನ್ನೂ ಗಮನದಲ್ಲಿರಿಸಿ ಕೊಂಡು ಕರ್ನಾಟಕದಲ್ಲಿ ಭಾಷೆಗಳಿಗೆ ನೀಡಬೇಕಾದ ಸ್ಥಾನವನ್ನು ಕುರಿತು ಮಾಡಿದ ತರ್ಕಬದ್ಧ ಚಿಂತನೆಗಳಲ್ಲಿ ಇವರದೂ ಒಂದು. ಮಾಸ್ತಿಯವರ ಭಾಷಾ ಚಿಂತನೆಯೊಂದಿಗೆ ಇದನ್ನೂ ಹೋಲಿಸಬಹುದು.

ಎ) ಮುದವೀಡು ಕೃಷ್ಣರಾಯರು :

1) ಆಡಳಿತ, ಶಿಕ್ಷಣ, ಸಾರ್ವಜನಿಕ ಜನಜೀವನದಲ್ಲಿ ಕನ್ನಡವೇ ಆಳಲಿ

2) ರಾಷ್ಟ್ರಭಾಷೆಯ ಸ್ಥಾನದಲ್ಲಿ ಹಿಂದಿಯಿರಲಿ — ಆದರೆ ಅದನ್ನು ಎಲ್ಲರೂ ಕಲಿತೇ ತೀರಬೇಕೆಂಬ ಹಟ ಬೇಡ; ಕನ್ನಡವನ್ನು ತಿರಸ್ಕರಿಸುವುದೂ ಬೇಡ.

"ಇಂಗ್ಲೀಷು ಭಾಷೆಯು ನಮ್ಮ ರಾಷ್ಟ್ರದ 'ರಾಜಕೀಯ ಗುಲಾಮಗಿರಿ' ಯ ಚಿರಂತನ ಚಿಹ್ನೆಯಾಗಿ ಕೊನೆಯವರೆಗೂ ಇಲ್ಲಿ ನೆಲಸಬೇಕೆಂದು ಯಾರೂ ಅಪೇಕ್ಷಿಸ ಲಾರರು; ನಾನೂ ಅಪೇಕ್ಷಿಸುವುದಿಲ್ಲ." ಎನ್ನುವ ಮುದವೀಡು ಕೃಷ್ಣರಾಯರು, ಉಳಿದವರ ಹಾಗೆ, ಇಂಗ್ಲಿಷ್ ಭಾಷೆಯಿಂದ ಲಭಿಸುವ ಅಂತರರಾಷ್ಟ್ರೀಯ ಸಂಪರ್ಕ, ವೈಜ್ಞಾನಿಕ ಜಗತ್ತಿನ ಪರಿಚಯ — ಈ ಅನುಕೂಲತೆಗಳ ಬಗ್ಗೆ ಹೆಚ್ಚು ಹೇಳುವುದಿಲ್ಲ.

ಆದರೆ ಇಂಗ್ಲೀಷಿನ ಹಾಗೂ ಹಿಂದಿಯ ಹೇರಿಕೆಯ ದುಷ್ಪರಿಣಾಮಗಳನ್ನು ಇವರು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಅವರ ಚಿಂತನೆಗಳು ಭಾಷಾಸಮಸ್ಯೆಗಳ ಕೂಲಂಕಷ ಪರಿಶೀಲನೆಯಿಂದ ಮೂಡಿ ಬಂದಿರುವುದಕ್ಕೆ ಬದಲಾಗಿ ರಾಷ್ಟ್ರೀಯತೆ ಹಾಗೂ ಕನ್ನಡಾಭಿಮಾನದಿಂದ ಪ್ರಭಾವಿತವಾಗಿದೆ. ಮುಖ್ಯವಾಗಿ ಇಂಗ್ಲೀಷಿನ ಅವಶ್ಯಕತೆಯ ಕುರಿತು ಅವರು ಹೆಚ್ಚು ಹೇಳುವುದಿಲ್ಲ.

ಏ) ಎ.ಆರ್. ಕೃಷ್ಣಶಾಸ್ತ್ರಿ :

1) ಮೊದಲ ಸ್ಥಾನ — ಮಾತೃಭಾಷೆಗೆ
2) ದೇಶಭಾಷೆಗೆ ಎರಡನೆಯ ಸ್ಥಾನ
3) ಇಂಗ್ಲೀಷಿಗೆ ಮೂರನೇ ಸ್ಥಾನ

ಸಂಸ್ಕೃತಕ್ಕೆ ಮೂರನೆಯ ಸ್ಥಾನ. (ಮಾತೃಭಾಷೆಯೂ ದೇಶಭಾಷೆಯೂ ಒಂದೇ ಆಗಿರುವ ಅದೃಷ್ಟವಂತನು ಇದನ್ನು ಓದಬೇಕು.) [56]

ಹಿಂದಿಯ ಹೇರಿಕೆ ಬೇಡ — ಎನ್ನುತ್ತಾರೆ ಎ.ಆರ್. ಕೃಷ್ಣಶಾಸ್ತ್ರಿಯವರು. ಇವರು ಮಾತೃಭಾಷೆ, ದೇಶಭಾಷೆ — ಇವುಗಳಿಗಿರುವ ವ್ಯತ್ಯಾಸವನ್ನು ಗಮನಿಸಿ, ಮೂರು ಭಾಷೆಗಳ ಅವಶ್ಯಕತೆಯನ್ನೂ, ಇಷ್ಟಾನುಸಾರ ಇತರ ಭಾಷೆಗಳನ್ನೂ ಕಲಿಯಬೇಕು ಎನ್ನುತ್ತಾರೆ. ಭಾಷೆಗಳ ನಡುವಿನ ಸಂಬಂಧ, ಸಮಸ್ಯೆ ಹಾಗೂ ಭಾಷಾನೀತಿಯ ಕುರಿತು ಕೃಷ್ಣಶಾಸ್ತ್ರಿಗಳ ಚಿಂತನೆಯನ್ನು ಮಾಸ್ತಿ ಹಾಗೂ ರಂ.ರಾ.ದಿವಾಕರರ ವಿಚಾರಗಳೊಂದಿಗೆ ಹೋಲಿಸಬಹುದು.

ಐ) ಸಿ.ಕೆ. ವೆಂಕಟರಾಮಯ್ಯನವರು:

1) ಕನ್ನಡಿಗರು ಮೊದಲ ಗಮನ ಕೊಡಬೇಕಾದದ್ದು ಕನ್ನಡಕ್ಕೆ.
2) ಎರಡನೆಯದಾಗಿ ಸಂಸ್ಕೃತ ಮತ್ತು ಇಂಗ್ಲಿಷಿಗೆ.
3) ತಕ್ಕಷ್ಟು ವ್ಯವಧಾನ, ಸಾಮರ್ಥ್ಯಗಳಿರುವವರು ಹಿಂದೀ ಅಥವಾ ತಮಿಳು, ತೆಲುಗು, ಬಂಗಾಳಿ, ಫ್ರೆಂಚ್ — ಯಾವುದೇ ಭಾಷೆಗಳನ್ನು ಕಲಿಯಬಹುದು.

ಇಲ್ಲಿ ಕೆಲವು ಸಂಗತಿಗಳನ್ನು ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಗಮನಿಸಬಹುದು.

1. ಮಾತೃಭಾಷೆ, ದೇಶಭಾಷೆ (ಪ್ರಾಂತಭಾಷೆ) — ಎಂಬ ವಿಭಾಗ ಮಾಡಿಕೊಂಡು ಚಿಂತಿಸಿರುವುದು: ಬಿ.ಎಂ.ಶ್ರೀ, ಮಾಸ್ತಿ, ರಂ.ರಾ. ದಿವಾಕರ ಹಾಗೂ ಎ.ಆರ್.ಕೃಷ್ಣ ಶಾಸ್ತ್ರಿ ಯವರು ಇವುಗಳ ನಡುವಿನ ಅಂತರವನ್ನು ಗಮನಿಸಿಕೊಂಡು ತಮ್ಮ ವಿಚಾರಗಳನ್ನು ಮುಂದಿಟ್ಟಿದ್ದಾರೆ. ಇವರಲ್ಲಿ 'ಶ್ರೀ' ಯವರು ಹಾಗೂ ಮಾಸ್ತಿಯವರು, ಭಾಷಾ ಅಲ್ಪಸಂಖ್ಯಾತರಿಗೆ ಬಹುಸಂಖ್ಯಾತರ ಭಾಷೆ ತಕ್ಕಮಟ್ಟಿಗೆ ಬರುವುದು ಸಹಜವಾದ್ದರಿಂದ ಅವರೂ ಆ ಪ್ರಾಂತದ ಭಾಷೆಯನ್ನು ಕಲಿಯಬೇಕು — ಎನ್ನುತ್ತಾರೆ. ದಿವಾಕರ ರಂಗರಾಯರು (ರಂ.ರಾ.ದಿವಾಕರ), ಅಲ್ಪಸಂಖ್ಯಾತ ಭಾಷೆಯವರು ನೂರಕ್ಕೆ ಇಪ್ಪತ್ತೈದರಷ್ಟು ಇದ್ದ ಪಕ್ಷದಲ್ಲಿ ಅವರ 'ಮನೆಮಾತಿ' ನಲ್ಲಿ ನಾಲ್ಕು ವರ್ಷ ಪ್ರಾಥಮಿಕ ಶಿಕ್ಷಣ ಕೊಡಲ್ಪಡಬೇಕು — ಎನ್ನುತ್ತಾರೆ. ಎ.ಆರ್.ಕೃ. ಅವರು ಮಾತೃಭಾಷೆಗೆ ಪ್ರಥಮ ಸ್ಥಾನವನ್ನೂ, ದೇಶಭಾಷೆಗೆ ದ್ವಿತೀಯ ಸ್ಥಾನವನ್ನೂ ಕೊಡುತ್ತಾರೆ. ''ಎಲ್ಲಿ ಮಾತೃಭಾಷೆಯೇ ದೇಶಭಾಷೆಯಾಗುತ್ತದೆಯೋ ಅಲ್ಲಿ ದಾರಿ ಸುಗಮ ವಾಯಿತು''[57] ಎಂದು ಅವರು ಹೇಳುತ್ತಾರೆ. ಇದೇ ರೀತಿ ಬಿ.ಎಂ.ಶ್ರೀಯವರೂ, ''ಕನ್ನಡ ದೇಶದಲ್ಲಿ ಕನ್ನಡವೇ ದೇಶಭಾಷೆ. ನೂರರಲ್ಲಿ ಎಂಬತ್ತು ಜನರಿಗೆ ಇದೇ ಮಾತೃಭಾಷೆಯಾಗಿಯೂ ಇದೆ.'' ಎನ್ನುತ್ತಾರೆ.[58] ಇದರಿಂದ, ಒಂದು ವಿಚಾರವನ್ನು ಗ್ರಹಿಸಬಹುದು: ಒಂದು ಪ್ರದೇಶದಲ್ಲಿ ಬಹುಸಂಖ್ಯಾತರ ಭಾಷೆ ಆ ಪ್ರದೇಶದ ಭಾಷೆ; 'ದೇಶಭಾಷೆ'.ಅಲ್ಲಿ ಅಲ್ಪಸಂಖ್ಯಾತರಾಗಿರುವ ಭಾಷೆಯವರು 'ದೇಶಭಾಷೆ' ಯನ್ನು ಕಲಿಯುತ್ತಾರೆ; ಆದರೆ ಅವರಿಗೆ ವಿದ್ಯಾಭ್ಯಾಸವನ್ನು ಯಾವ ಭಾಷೆಯಲ್ಲಿ ನೀಡಬೇಕು ಎಂಬ ವಿಷಯದಲ್ಲಿ ಎರಡು ಅಭಿಪ್ರಾಯಗಳಿವೆ — 1) ಅವರಿಗೆ ದೇಶಭಾಷೆಯಲ್ಲೇ ಶಿಕ್ಷಣ ನೀಡಬೇಕು. ('ಶ್ರೀ' ಹಾಗೂ ಮಾಸ್ತಿ) 2) ಮಾತೃಭಾಷೆಯಲ್ಲೂ ದೇಶಭಾಷೆ ಯಲ್ಲೂ ಶಿಕ್ಷಣ ನೀಡಬೇಕು. (ರಂ.ರಾ.ದಿವಾಕರ ಮತ್ತು ಎ.ಆರ್.ಕೃ.)

2. ಇಂಗ್ಲಿಷ್‌ಗೆ ಎರಡನೇ ಸ್ಥಾನವನ್ನು ಹೆಚ್ಚಿನ ಚಿಂತಕರು ನೀಡಿದ್ದಾರೆ. ಇದಕ್ಕೆ ಕಾರಣವೂ ಸ್ಪಷ್ಟ — ಒಂದು, ಇಂಗ್ಲಿಷಿನ ಮೂಲಕ ಅಂತರ್ಪ್ರಾಂತೀಯ, ಅಂತರರಾಷ್ಟ್ರೀಯ

ಸಂಪರ್ಕ ಸಾಧ್ಯ; ಎರಡು, ಆಧುನಿಕ ವಿಜ್ಞಾನ, ತಂತ್ರಜ್ಞಾನಗಳನ್ನು ಕಲಿಯಲು ಅದು ಅಗತ್ಯ — ಎಂದು. ರಂ.ರಾ.ದಿವಾಕರ, ಮುದವೀಡು ಕೃಷ್ಣರಾಯರು ಹಿಂದಿಗೆ ಎರಡನೇ ಸ್ಥಾನವನ್ನು ಕೊಡುತ್ತಾರೆ. ಇದಕ್ಕೆ ಕಾರಣ ಸ್ವಾತಂತ್ರ್ಯ ಹೋರಾಟದ ಅಂಗವಾಗಿ ಹಿಂದಿ ರಾಷ್ಟ್ರಭಾಷೆ ಎಂಬ ಭಾವನೆ ಅವರಲ್ಲಿ ತುಂಬಿಕೊಂಡಿದ್ದುದು. ಎ.ಆರ್.ಕೃ. ಅವರು ಇಂಗ್ಲಿಷಿಗೆ ಮೂರನೇ ಸ್ಥಾನವನ್ನು ಕೊಟ್ಟಿರುವುದು, ಮಾತೃ ಭಾಷೆ — ದೇಶಭಾಷೆ ಇವುಗಳಿಗೆ ಕ್ರಮವಾಗಿ ಒಂದನೇ ಹಾಗೂ ಎರಡನೇ ಸ್ಥಾನವನ್ನು ಕೊಟ್ಟಿರುವುದರಿಂದ. ಅಂದರೆ ಮಾತೃಭಾಷೆ ಅಥವಾ ದೇಶಭಾಷೆಯ ಬಳಿಕ ಉಳಿದ ಭಾಷೆಗಳಿಗಿಂತ ಹೆಚ್ಚಿನ ಪ್ರಾಮುಖ್ಯತೆ ಇಂಗ್ಲಿಷಿಗೇ.

3. ಸಂಸ್ಕೃತಕ್ಕೆ ಕೆಲವರು ಎರಡನೇ ಸ್ಥಾನವನ್ನೂ, ಕೆಲವರು ಮೂರನೇ ಸ್ಥಾನವನ್ನೂ ನೀಡಿದ್ದಾರೆ. ಬಿ.ಎಂ.ಶ್ರೀ., ಡಿ.ವಿ.ಜಿ., ಸಿ.ಕೆ. ವೆಂಕಟರಾಮಯ್ಯ — ಇವರು ಸಂಸ್ಕೃತ ಮತ್ತು ಇಂಗ್ಲಿಷಿಗೆ — ಜೊತೆಯಾಗಿ — ಎರಡನೇ ಸ್ಥಾನವನ್ನು ನೀಡಿದ್ದಾರೆ. ಸಂಸ್ಕೃತಕ್ಕೆ ಎರಡನೇ ಸ್ಥಾನ ನೀಡಿರುವವರು ಅದರೊಂದಿಗೆ ಇಂಗ್ಲಿಷನ್ನೂ ಇರಿಸಿದ್ದಾರೆ. ಕನ್ನಡ, ಸಂಸ್ಕೃತ, ಇಂಗ್ಲಿಷ್ — ಈ ಕ್ರಮದಲ್ಲಿ ಸ್ಥಾನ ಕಲ್ಪಿಸಿಲ್ಲ; ಆದ್ದರಿಂದ ಸಂಸ್ಕೃತಕ್ಕಿಂತ, ಇಂಗ್ಲಿಷ್ ಭಾಷೆಗೇ ಎರಡನೇ ಸ್ಥಾನ ಸಲ್ಲತಕ್ಕದ್ದು ಎಂಬುದು ಒಟ್ಟಾರೆಯಾಗಿ ಮೂಡಿಬರುವ ಅಭಿಪ್ರಾಯ — ಎಂಬುದು ಗಮನಾರ್ಹ. ಆದ್ದರಿಂದ ಸಂಸ್ಕೃತಕ್ಕೆ ಕನ್ನಡ, ಇಂಗ್ಲಿಷ್ ಭಾಷೆಗಳ ನಂತರದ ಸ್ಥಾನವನ್ನೇ ಕೊಟ್ಟಿದ್ದಾರೆ ಎಂದು ತಿಳಿಯಬಹುದು. ರಂ.ರಾ. ದಿವಾಕರರು ಕನ್ನಡ, ಹಿಂದಿ, ಇಂಗ್ಲಿಷ್ ಆದ ಬಳಿಕ ನಾಲ್ಕನೇ ಸ್ಥಾನವನ್ನು ಸಂಸ್ಕೃತಕ್ಕೆ ಕೊಟ್ಟಿದ್ದಾರೆ.

4. ಹಿಂದಿಗೆ ಕೆಲವರು ಮೂರನೇ ಸ್ಥಾನವನ್ನೂ, ಕೆಲವರು ನಾಲ್ಕನೇ ಸ್ಥಾನವನ್ನೂ ಕೊಟ್ಟಿದ್ದಾರೆ. ರಾಷ್ಟ್ರೀಯ ಚಳವಳಿಯ ಪ್ರೇರಣೆಯಿಂದ ಕೆಲವರು ಎರಡನೇ ಸ್ಥಾನವನ್ನು ಕೊಟ್ಟಿದ್ದಾರೆ. ಇಲ್ಲಿ ಮೂರು ಪ್ರವೃತ್ತಿಗಳನ್ನು ಗಮನಿಸಬಹುದು:

1) ಹಿಂದಿಗಿಂತ ಕನ್ನಡ, ಇಂಗ್ಲಿಷ್, ಸಂಸ್ಕೃತಗಳೇ ಮುಖ್ಯವೆನಿಸಿರುವುದು. ಇಲ್ಲಿ ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ವ್ಯಾವಹಾರಿಕ ಕಾರಣಗಳು ಪ್ರಧಾನ.

2) ಹಿಂದೀ ಭಾಷೆ ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೆ ತಡೆಯಾಗುವುದನ್ನು ಅರಿತು

ಕೊಂಡು ಅದಕ್ಕೆ ವಿರೋಧವನ್ನು ವ್ಯಕ್ತಪಡಿಸಿರುವುದು.

3) ಇಂಗ್ಲಿಷ್ ಬಗ್ಗೆ ವಿರೋಧ ಹಾಗೂ ರಾಷ್ಟ್ರೀಯತೆಯ ಕುರುಹಾಗಿ ಹಿಂದಿಯನ್ನು ಒಪ್ಪಿಕೊಂಡಿರುವುದು.

ಮೊದಲಿನ ಎರಡು ಪ್ರವೃತ್ತಿಗಳು ಹಿಂದಿಗೆ ಮೂರನೇ ಮತ್ತು ನಾಲ್ಕನೇ ಸ್ಥಾನವನ್ನು ನೀಡಲೂ ಕೊನೆಯ ಪ್ರವೃತ್ತಿ ಅದಕ್ಕೆ ಎರಡನೇ ಸ್ಥಾನವನ್ನು ನೀಡಲೂ ಕಾರಣವಾಯಿತೆನ್ನಬಹುದು.

ಒಟ್ಟಿನಲ್ಲಿ, ಇಂದಿನ ಭಾಷಾಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಇವುಗಳಲ್ಲಿ ಮಾಸ್ತಿ, ದಿವಾಕರ ರಂಗರಾಯರು, ಎ.ಆರ್. ಕೃಷ್ಣಶಾಸ್ತ್ರೀ — ಇವರ ಚಿಂತನೆಗಳಲ್ಲಿನ ಕೆಲವು ವಿಚಾರಗಳು ಪ್ರಸ್ತುತವಾಗಬಲ್ಲವು ಅನ್ನಿಸುತ್ತದೆ. ಅವುಗಳು:

1) ಮಾತೃಭಾಷೆ ಹಾಗೂ ದೇಶಭಾಷೆ (ಪ್ರಾಂತಭಾಷೆ)ಗಳ ನಡುವಿನ ಸಂಬಂಧ.
2) ಜನರ ಅಭಿಪ್ರಾಯಕ್ಕೆ, ಅವರ ಅಭಿವೃದ್ಧಿಗೆ ಅನುಗುಣವಾಗಿ ಭಾಷಾ ಧೋರಣೆಯನ್ನು ರೂಪಿಸಿಕೊಳ್ಳಬೇಕಾದ ಅಗತ್ಯ.
3) ಅವಶ್ಯಕತೆ ಹಾಗೂ ಪ್ರಯೋಜನವನ್ನು ದೃಷ್ಟಿಯಲ್ಲಿಟ್ಟುಕೊಂಡು ಭಾಷೆಗಳಿಗೆ ಸ್ಥಾನ ಕಲ್ಪಿಸಿರುವುದು.
4) ಸ್ವಂತ ಹಿತಾಸಕ್ತಿ, ಭಾವನೆಗಳಿಗಿಂತ ವಸ್ತುಸ್ಥಿತಿಯನ್ನು ನೋಡಿಕೊಂಡು ಭಾಷೆಗಳ ನಡುವಿನ ಸಮಸ್ಯೆಗಳಿಗೆ ಪರಿಹಾರ ಸೂಚಿಸಿರುವುದು.
5) ಪ್ರಾಂತಭಾಷೆಯ ಅನನ್ಯತೆಯ ಮೂಲಕ ರಾಷ್ಟ್ರೀಯ ಏಕತೆಯನ್ನು ಸಾಧಿಸುವುದು.

ಮೇಲಿನ ಪರಿಶೀಲನೆಯಿಂದ ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ಚಿಂತಕರು ಇಂಗ್ಲಿಷ್-ಕನ್ನಡ ಸಂಬಂಧದ ಕುರಿತು ರೂಪಿಸಿಕೊಂಡಿದ್ದ ಅಭಿಪ್ರಾಯವನ್ನು ಒಟ್ಟಂದದಲ್ಲಿ ಹೀಗೆ ಗ್ರಹಿಸಬಹುದು: ಇಂಗ್ಲಿಷರ ಬಗ್ಗೆ ಎಷ್ಟೇ ವಿರೋಧವಿದ್ದರೂ, ಇಂಗ್ಲಿಷ್ ಭಾಷೆ ಹಾಗೂ ಅದರ ಮೂಲಕ ಕನ್ನಡಕ್ಕೆ ಹೊಸ ವಿಚಾರಗಳ ಪರಿಚಯವಾದುದನ್ನು ಕನ್ನಡಿಗರು ಸ್ವೀಕರಿಸಿಕೊಂಡರು. ಆಧುನಿಕ ವಿಜ್ಞಾನ, ತಂತ್ರಜ್ಞಾನ, ಸಾಹಿತ್ಯಗಳ ತಿಳುವಳಿಕೆಯೇ

ಇಂಗ್ಲಿಷನ್ನು ಸ್ವೀಕರಿಸುವುದರ ಮುಖ್ಯ ಉದ್ದೇಶವಾಗಿತ್ತು. ಆದರೆ ಭಾರತದಲ್ಲಿ ಸಾರಿಗೆ, ಇತ್ಯಾದಿಗಳ ಮೂಲಕ ಉಂಟಾಗಿದ್ದ ಪ್ರಾದೇಶಿಕ ಸಂಪರ್ಕಗಳಿಂದಲೂ, ರಾಷ್ಟ್ರೀಯ ಏಕತೆಯ ಕಾರಣದಿಂದಲೂ ಇಲ್ಲಿನ ಬಹುಭಾಷಿಕ ಸಂದರ್ಭದಲ್ಲಿ ರಾಷ್ಟ್ರೀಯ ಸಂಪರ್ಕಕ್ಕೆ ಮತ್ತು ಅಂತರರಾಷ್ಟ್ರೀಯ ಸಂಪರ್ಕಕ್ಕೆ ಇಂಗ್ಲಿಷ್ ಉಪಯುಕ್ತ ಭಾಷೆಯಾಗಿ ಪರಿಗಣಿಸಲ್ಪಟ್ಟಿತ್ತು. ಆದರೆ ರಾಷ್ಟ್ರೀಯತೆ ಹಾಗೂ ನಾಡು — ನುಡಿಗಳ ಎಚ್ಚರ ದಿಂದಾಗಿ ಕರ್ನಾಟಕದಲ್ಲಿ ಕನ್ನಡವನ್ನು ಮತ್ತು 'ರಾಷ್ಟ್ರಭಾಷೆ' ಯೆಂದು ಭಾವಿಸಲಾದ ಹಿಂದಿಯನ್ನು ಎತ್ತಿಹಿಡಿಯುವುದು ಅನಿವಾರ್ಯವಾಗಿತ್ತು. ರಾಷ್ಟ್ರಭಾಷೆಯ ಅವಶ್ಯಕತೆ ಗಿಂತ, ನಾಡಿನ ಅಭಿವೃದ್ಧಿಯ ಮೇಲೆ ಗಮನಾರ್ಹ ಪರಿಣಾಮಗಳನ್ನು ಬೀರಬಲ್ಲ ಕನ್ನಡ ಭಾಷೆಯ ಜಾಗೃತಿಯೇ ಹೆಚ್ಚು ಅವಶ್ಯಕವಾಗಿತ್ತು. ಆದ್ದರಿಂದ ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ — ಇಂಗ್ಲಿಷ್ ಸಂಬಂಧದ ಕುರಿತು ಚಿಂತಿಸಿದವರು, ಕನ್ನಡದ ಬೆಳವಣಿಗೆಗೆ ಇಂಗ್ಲಿಷನ್ನು ಕಲಿಯಬೇಕೇ ಹೊರತು, ಇಂಗ್ಲಿಷಾಗಿ ಅಲ್ಲ — ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಕೆಲವರು ಇಂಗ್ಲಿಷನ್ನು ಕನ್ನಡದ ಬೆಳವಣಿಗೆಗೆ ಅನುಕೂಲವಾಗಬಲ್ಲ 'ಸಹಾಯಕ ಭಾಷೆ' ಎಂದಿದ್ದಾರೆ. ಇಂಗ್ಲಿಷ್ ವ್ಯಾಮೋಹದಲ್ಲಿ ಮೈಮರೆತ ಮಂದಿ ಆ ಕಾಲದಲ್ಲಿ ಸಾಕಷ್ಟು ಇದ್ದರಾದ ಕಾರಣ, ಇಂಗ್ಲಿಷ್ ಸ್ವೀಕಾರದ ಮಿತಿಯನ್ನು ಅನೇಕ ರೀತಿಯಲ್ಲಿ ಹೇಳುತ್ತಾರೆ. ಇಂಗ್ಲಿಷ್ ಬೇಕು ಎಂದ ಮಾತ್ರಕ್ಕೆ, ಅದನ್ನು ಜನಸಾಮಾನ್ಯರೆಲ್ಲರೂ ಕಲಿಯಬೇಕೆಂದಲ್ಲ; ಕೆಲವರು — ಅವಶ್ಯಕತೆಯಿರುವವರು ಮಾತ್ರ — ಕಲಿತರೆ ಸಾಕು ಎಂದು ಹೆಚ್ಚಿನವರೂ ಸ್ಪಷ್ಟಪಡಿಸುತ್ತಾರೆ. ಆದರೆ ಆಡಳಿತ, ಶಿಕ್ಷಣ, ನ್ಯಾಯಾಲಯ ಗಳಲ್ಲಿ ಇಂಗ್ಲಿಷ್ ಇರಕೂಡದೆಂದೂ, ಅದು ಪ್ರಾದೇಶಿಕ ಭಾಷೆಯ ಅಸ್ತಿತ್ವಕ್ಕೆ, ಅದರ ಬೆಳವಣಿಗೆಗೆ ಆತಂಕವಾಗೀತೆಂದೂ ಅವರು ಎಚ್ಚರಿಸುತ್ತಾರೆ. ಒಟ್ಟಿನಲ್ಲಿ, ಜ್ಞಾನಾಭಿವೃದ್ಧಿಗೆ, ಕನ್ನಡಾಭಿವೃದ್ಧಿಗೆ ಹಾಗೂ ಹೊರಪ್ರಪಂಚದ ವ್ಯವಹಾರಕ್ಕೆ ಇಂಗ್ಲಿಷನ್ನು ಸಾಕಷ್ಟು ಬಳಸಬೇಕು; ಆದರೆ ಕನ್ನಡನಾಡಿನ ಎಲ್ಲೆಡೆ ಕನ್ನಡವೇ ಮುಖ್ಯವಾಗಿರಬೇಕು ಎಂದು ಎಲ್ಲರ ಮುಖ್ಯ ಅಭಿಪ್ರಾಯವಾಗಿದೆ.

## ಟಿಪ್ಪಣಿಗಳು

1. ಬಿ.ಎಂ.ಶ್ರೀಯವರ 'ಕನ್ನಡ ಮಾತು ತಲೆಯೆತ್ತುವ ಬಗೆ' ಹಾಗೂ ಇನ್ನಿತರ ಉಪನ್ಯಾಸ, ಲೇಖನಗಳನ್ನು ಗಮನಿಸಬಹುದು: 'ಶ್ರೀ ಸಾಹಿತ್ಯ', ಮೈಸೂರು ವಿ.ವಿ.ಪ್ರಕಟಣೆ, 1983.
2. ಶ್ರೀ ಸಾಹಿತ್ಯ, ಪು.246
3. ಅದೇ., ಪು.246
4. ಅಧ್ಯಕ್ಷರ ಭಾಷಣಗಳು — ಸಂಪುಟ 1, ಪು.6–7
5. ಅದೇ., ಪು.103
6. ಅದೇ.
7. ಅದೇ., ಪು.282–83
8. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.24–25
9. ಅದೇ., ಪು.25
10. ಅದೇ., ಪು.25
11. ಅಧ್ಯಕ್ಷರ ಭಾಷಣಗಳು — ಸಂಪುಟ 1, ಪು.274–75
12. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.68
13. ಅದೇ., ಪು.133
14. ಶ್ರೀ ಸಾಹಿತ್ಯ, ಪು.290
15. ಅಧ್ಯಕ್ಷರ ಭಾಷಣಗಳು — ಸಂಪುಟ 1, ಪು.78
16. ಅದೇ., ಪು.103
17. ಅದೇ., ಪು.51–52
18. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.69 ಮತ್ತು 384
19. ಅಧ್ಯಕ್ಷರ ಭಾಷಣಗಳು — ಸಂಪುಟ 1, ಪು.102
20. ಅದೇ., ಪು.6
21. ಅದೇ., ಪು.9
22. ಅದೇ., ಪು.25
23. ಅದೇ., ಪು.78 ಮತ್ತು 103
24. ಅದೇ., ಪು.304–305

25. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.107

26. ಅದೇ., ಪು.110

27. ಅದೇ., ಪು.134

28. ಅದೇ., ಪು.316

29. ಅದೇ., ಪು.384

30. ಅದೇ., ಪು.385

31. ಅಧ್ಯಕ್ಷರ ಭಾಷಣಗಳು — ಸಂಪುಟ 1, ಪು.9

32. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.308

33. ಡಿ.ವಿ.ಜಿ. ಕೃತಿಶ್ರೇಣಿ, ಸಂಪುಟ –1, ಪು.17

34. ಶ್ರೀ ಸಾಹಿತ್ಯ, ಪು.290

35. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.68

36. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.25

37. ಅದೇ., ಪು.134

38. ಶ್ರೀ ಸಾಹಿತ್ಯ, ಪು.290

39. ಅದೇ., ಪು.295

40. ಅದೇ.

41. ಅದೇ., ಪು.290

42. ''ದೇಶದಲ್ಲಿ ನಡೆಯಬೇಕಾದ ಕಾರ್ಯಗಳೆಲ್ಲಾ ಆ ಭಾಷೆಯಲ್ಲೇ ನಡೆಯುತ್ತಿದ್ದುವು; ವಿದ್ಯಾಭ್ಯಾಸದ ಭಾಷೆ ಅದು, ರಾಜಕಾರ್ಯ ಸಂಸ್ಥೆಗಳಲ್ಲಿ ಉಪಯೋಗಿಸುವ ಭಾಷೆ ಅದು, ಜನಸಾಮಾನ್ಯದ ಭಾಷೆ ಅದು'' — ಶ್ರೀ ಸಾಹಿತ್ಯ, ಪು.287.

43. ಅಧ್ಯಕ್ಷರ ಭಾಷಣಗಳು — ಸಂಪುಟ 1, ಪು.8–14

44. ಅದೇ., ಪು.103

45. ಅದೇ., ಪು.227

46. ಡಿ.ವಿ.ಜಿ. ಕೃತಿಶ್ರೇಣಿ — ಸಂಪುಟ 1, ಪು.212

47. ಅದೇ., ಪು.15

48. ಅದೇ.

49. ವಿರಕ್ತರಾಷ್ಟ್ರಕ ಡಿ.ವಿ.ಜಿ., ಪು.213 ರಲ್ಲಿ ಉದ್ಧೃತ

50. ಡಿ.ವಿ.ಜಿ. ಕೃತಿಶ್ರೇಣಿ — ಸಂಪುಟ 1, ಪು.225

51. ಅಧ್ಯಕ್ಷರ ಭಾಷಣಗಳು – ಸಂಪುಟ 2, ಪು.26–27

52. ಅದೇ., ಪು.25

53. ಅದೇ., ಪು.24–25

54. ಅದೇ., ಪು.49

55. ಅದೇ., ಪು.70

56. ಅದೇ., ಪು.187

57. ಅದೇ., ಪು.184

58. ಶ್ರೀ ಸಾಹಿತ್ಯ, ಪು.286

## ಅಧ್ಯಾಯ 5: ಇಂಗ್ಲಿಷ್ – ಕನ್ನಡ ಸಂಬಂಧ ಕುರಿತ ಚಿಂತನೆಗಳು – 2

( ಸ್ವಾತಂತ್ರ್ಯೋತ್ತರ )

1947 ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಬಳಿಕ ಭಾಷಾಸಮಸ್ಯೆಗಳ ಸ್ವರೂಪವೇ ಬದಲಾಯಿತು. ಬ್ರಿಟಿಷರು ಇಲ್ಲಿಂದ ಹೋದ ಬಳಿಕ ಉಂಟಾದ ರಾಜಕೀಯ ಬೆಳವಣಿಗೆಗಳ ನಡುವೆ ಭಾಷೆಗಳ ನಡುವಿನ ಗೊಂದಲವನ್ನು ಅರಿತುಕೊಳ್ಳುವುದೂ, ಅವುಗಳಿಗೆ ಸೂಕ್ತ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳುವುದೂ ಸಾಧ್ಯವಾಗಲಿಲ್ಲ. ಗಾಂಧೀಜಿ, ಟಾಗೋರ್ ಹಾಗೂ ಇನ್ನಿತರ ಚಿಂತಕರ ದೂರದೃಷ್ಟಿಯ ಭಾಷಾನೀತಿಗಳನ್ನು ಕೇಂದ್ರದ ನಾಯಕರು ಅರ್ಥಮಾಡಿಕೊಳ್ಳದುದೇ ಇದಕ್ಕೆ ಮುಖ್ಯ ಕಾರಣ. ''ಗಾಂಧಿಯವರ ಉಳಿದೆಲ್ಲ ವಿಚಾರಗಳಂತೆ ಭಾಷೆಯನ್ನು ಕುರಿತ ವಿಚಾರಕ್ಕೆ ಕೂಡ ದೇಶದ ನಾಯಕರು ಅದಕ್ಕೆ ಸಲ್ಲಬೇಕಾದ ಪ್ರಾಮುಖ್ಯ ನೀಡಲಿಲ್ಲ. ಭಾರತದ ಸಂವಿಧಾನದ ಸಭೆ ಈ ಮುಖ್ಯ ವಿಚಾರವನ್ನು ಸಮರ್ಪಕವಾಗಿ ಇತ್ಯರ್ಥಪಡಿಸಲಾರದೆ ಹೋಯಿತು.'' ಎಂದು ಎಚ್ಚೆನ್ಕೆ ಯವರು ಹೇಳುತ್ತಾರೆ.[1] ರಾಷ್ಟ್ರೀಯತೆಯ ಸಂಕೇತವಾಗಿ ಹಿಂದೀ ಭಾಷೆಯನ್ನು 'ರಾಷ್ಟ್ರಭಾಷೆ' ಎಂದು ಕರೆದ ಗಾಂಧೀಜಿಯವರು ಉಳಿದ ಭಾರತೀಯ ಭಾಷೆಗಳನ್ನು ರಾಷ್ಟ್ರಭಾಷೆಗಳಲ್ಲ – ಎಂದೆನ್ನಲಿಲ್ಲ; ಅವುಗಳೂ ರಾಷ್ಟ್ರಭಾಷೆಗಳೇ; ಎಲ್ಲವಕ್ಕೂ ಸಮಾನ ಪ್ರಾತಿನಿಧ್ಯ – ಎಂದು ಭಾವಿಸಿದ್ದರು; ಅವೆಲ್ಲವುಗಳು ಆಯಾ ಪ್ರಾಂತಗಳಲ್ಲಿ ಸಮರ್ಪಕವಾಗಿ ಆಡಳಿತ ನಡೆಸುವುದರಿಂದಲೇ ಭಾರತದ ನಿಜವಾದ ಬೆಳವಣಿಗೆ ಸಾಧ್ಯ – ಎಂದು ಭಾವಿಸಿದ್ದರು. ಆದರೆ 'ಹಿಂದಿ ರಾಷ್ಟ್ರಭಾಷೆ' ಎಂದ ಮಾತ್ರಕ್ಕೆ ಅದೊಂದೇ ಭಾರತದ ರಾಷ್ಟ್ರಭಾಷೆ ಎಂಬಂತೆ ಹಿಂದೀ ನಾಯಕರು ವರ್ತಿಸಿದ್ದೇ ಭಾಷೆಗಳ ನಡುವಿನ ಹೋರಾಟಕ್ಕೆ ಕಾರಣವಾಯಿತು – ಎಂದು ಮಾಸ್ತಿಯವರು ಉಲ್ಲೇಖಿಸುತ್ತಾರೆ.[2] ಹಿಂದಿಯನ್ನು ಭಾರತದ ರಾಷ್ಟ್ರಭಾಷೆಯನ್ನಾಗಿ ಮಾಡುವುದು ಅವಶ್ಯಕವೆಂದೂ, ಅದಕ್ಕಾಗಿ ಹಿಂದಿಭಾಷೆ ಬೆಳೆದು ಸಮರ್ಥವಾಗುವ ತನಕ – ಹದಿನೈದು ವರ್ಷಗಳವರೆಗೆ – ಇಂಗ್ಲಿಷ್ ಭಾಷೆಯೇ ಅಧಿಕೃತ ಭಾಷೆಯಾಗಿ ಮುಂದುವರಿಯಬೇಕೆಂದೂ ನಿರ್ಣಯವಾಯಿತು. ಈ ನಿರ್ಣಯ ಹಲವು ತೊಂದರೆಗಳನ್ನು ಸೃಷ್ಟಿಸಿತು. ಇಲ್ಲಿ ಗಮನಿಸಬೇಕಾದ ಅಂಶಗಳು ಮೂರು :

1) 'ಹಿಂದಿ ರಾಷ್ಟ್ರ ಭಾಷೆ' ಎಂಬ ಅಭಿಪ್ರಾಯ 'ಹಿಂದಿಯೊಂದೇ ರಾಷ್ಟ್ರಭಾಷೆ' ಎಂಬ ಕಲ್ಪನೆಗೆ ಎಡೆಮಾಡಿಕೊಟ್ಟುದು.

2) ಇಂಗ್ಲಿಷ್ ಬದಲು ಭಾರತೀಯ ಭಾಷೆಗಳು, ಆಡಳಿತ ನಡೆಸಬೇಕು ಎಂಬ

ಆಶಯ ರೂಪುಗೊಳ್ಳುವುದಕ್ಕೆ ಬದಲಾಗಿ, ಹಿಂದಿಯೇ ಆ ಸ್ಥಾನವನ್ನು ತುಂಬಬೇಕು ಎಂಬ ಧೋರಣೆ ಉಂಟಾದುದು.

3) ಒಂದು ಭಾಷೆ ಸಾಕಷ್ಟು ಬೆಳವಣಿಗೆ ಹೊಂದಿದ ಮೇಲೆಯೇ ಅದನ್ನು ಇನ್ನೊಂದಕ್ಕೆ ಬದಲಿಯಾಗಿ, ರಾಷ್ಟ್ರಭಾಷೆಯಾಗಿ, ಜಾರಿಗೆ ತರಬಹುದು (ಇಲ್ಲಿ ಇಂಗ್ಲಿಷಿಗೆ ಬದಲಿಯಾಗಿ ಹಿಂದಿ) ಎಂಬ ನಿಲುವಿನಿಂದ ಭಾಷೆಯ ಪ್ರಯತ್ನಪೂರ್ವಕ ಬಳಕೆಯ ಮೂಲಕ ಅದು ತನ್ನಷ್ಟಕ್ಕೆ ತಾನೇ ಬೆಳೆಯುವ, ರೂಪುಗೊಳ್ಳುವ, ಹಾಗೂ ಜಾರಿಗೆ ಬರುವ ಸಹಜಕ್ರಿಯೆ ಅಲಕ್ಷಿತವಾದುದು.

ಈ ಮೂರು ವಿಷಯಗಳು ಮೂರು ಬಗೆಯಲ್ಲಿ ಸಮಸ್ಯೆಗಳ ಪರಂಪರೆಯನ್ನೇ ಸೃಷ್ಟಿಸಿದವು. ಮೊದಲನೆಯದು, ದೇಶದ ಭಾಷಾವೈವಿಧ್ಯತೆಯನ್ನೂ, ದೇಶದ ಏಕತೆ ಹಾಗೂ ಅಭಿವೃದ್ಧಿಗೆ ಅವೆಲ್ಲವುಗಳ ಪರಿಪೂರ್ಣ ಅಭಿವೃದ್ಧಿಯನ್ನೂ ಗಮನಿಸದೆ ಹಿಂದಿಯೊಂದನ್ನೇ ದೇಶದಲ್ಲೆಡೆ ಹೇರಲು ಕಾರಣವಾಯಿತು. "ಹಿಂದಿಯ ವಿಚಾರದಲ್ಲಿ ನಮ್ಮ ಆಡಳಿತಗಾರರು ತೋರಿಸಿದ ಅತಿಯಾದ ಮೋಹವೂ ಅದರ ಬೆಳವಣಿಗೆಯ ಬಗ್ಗೆ ಅವರಿಗಿದ್ದ ಆತುರವೂ ಪ್ರಾದೇಶಿಕ ಭಾಷೆಗಳ ಬಗ್ಗೆ ಅವರಿಗೆ ಇರಲಿಲ್ಲವಷ್ಟೇ ಅಲ್ಲ, ಪ್ರಾದೇಶಿಕ ಭಾಷೆಗಳು ಹಿಂದುಳಿಯಬೇಕೆಂದೇ ಅವರು ಸಂಚು ಹೂಡಿದರೆಂದು ಭಾವಿಸಿದರೂ ತಪ್ಪಾಗಲಾರದು" ಎನ್ನುತ್ತಾರೆ ಎಚ್ಚೆನ್ಕೆಯವರು.[3] ಹೀಗೆ ಹಿಂದಿಯ ಕುರಿತು ತೋರಿಸಿದ ಪಕ್ಷಪಾತದಿಂದ ಅದು ಬೆಳೆಯಿತು; ಪ್ರಾದೇಶಿಕ ಭಾಷೆಗಳು ಕ್ಷೀಣಿಸಿದವು.[4] ಎರಡನೆಯದು, ಪ್ರಾದೇಶಿಕ ಭಾಷೆಗಳಲ್ಲಿ ಆಡಳಿತ ನಡೆಸುವುದಕ್ಕೂ ಅವುಗಳು ಚೆನ್ನಾಗಿ ಬೆಳವಣಿಗೆ ಹೊಂದಿ ನಾಡಿನ ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಪ್ರಗತಿಗಳೊಂದಿಗೆ ದೇಶವನ್ನು ಬಲಪಡಿಸುವುದಕ್ಕೂ ಸಾಧ್ಯವಾಗದೇ ಇರಲು ಕಾರಣವಾಯಿತು. ಇದರಿಂದ ಹಿಂದೀತರ ಭಾಷೆಯ ಪ್ರಾಂತಗಳು ಇಂಗ್ಲಿಷ್ ಭಾಷೆಯನ್ನು ಹಿಂದಿಗೆ ಪ್ರತಿಯಾಗಿ ನಿಲ್ಲಿಸಿದವು. ಮೂರನೆಯದು ಇಲ್ಲಿ ಮುಖ್ಯವಾದದ್ದು; ಇಂಗ್ಲಿಷ್ ಭಾಷೆಯ ಹಿಡಿತವನ್ನು ಅದು ಮುಂದುವರೆಸಿತು. ಇಂಗ್ಲಿಷ್ ಆಡಳಿತ, ವ್ಯವಹಾರ, ನ್ಯಾಯಾಲಯಗಳಲ್ಲಿ ಹಾಗೆ ಮುಂದುವರಿದದ್ದರಿಂದಲೇ ಅದಕ್ಕೆ ಬದಲಿಯಾಗಿ ಬರಬೇಕಾದ ಭಾಷೆ ಅಥವಾ ಭಾಷೆಗಳು ಬೆಳವಣಿಗೆ ಹೊಂದಲಿಲ್ಲ. ಭಾಷೆ ಬೆಳೆಯದೆ ಬಳಕೆಗೆ ಬರಲಿಲ್ಲ, ಬಳಕೆಗೆ ಬಾರದೆ ಭಾಷೆ ಬೆಳೆಯಲಿಲ್ಲ — ಈ ಹೆಣೆದ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗಲಿಲ್ಲ. ಬಳಕೆ, ಬೆಳವಣಿಗೆ — ಇವುಗಳಲ್ಲಿ ಬಳಕೆಯೇ ಪ್ರಬಲ ಎಂಬ

ಸಂಗತಿಯನ್ನು, ಅಂದರೆ ಪ್ರಯತ್ನವನ್ನು, ಇಲ್ಲಿ ಗಣನೆಗೆ ತೆಗೆದುಕೊಳ್ಳದ್ದರಿಂದ, ಪರಭಾಷೆಯೊಂದರ ಹಿಡಿತವೂ ಅದು ಉಂಟುಮಾಡುವ ಸಮಸ್ಯೆಗಳೂ ಮುಂದುವರಿದವು. ಸ್ವಾತಂತ್ರ್ಯ ಬಂದ ಕೂಡಲೇ ಇಂಗ್ಲಿಷಿಗೆ ಬದಲಿಯಾಗಿ ಪ್ರಾದೇಶಿಕ ಭಾಷೆಗಳನ್ನು ಭಾರತದ ರಾಷ್ಟ್ರೀಯ ಭಾಷೆಗಳನ್ನಾಗಿ ಜಾರಿಗೆ ತಂದಿದ್ದರೆ ಈ ಯಾವ ಸಮಸ್ಯೆಗಳೂ ಏಳುತ್ತಿರಲಿಲ್ಲ. ಇಂಗ್ಲಿಷ್ ಭಾಷೆಯ ಹಿಡಿತದಲ್ಲಿ ಭಾರತ ಉಳಿಯಬಾರದು ಎಂದು ಎಲ್ಲರೂ ಬಯಸಿದ್ದರು. ಆದರೆ ಅದಕ್ಕೆ ಕೈಗೊಂಡ ಕಾರ್ಯವಿಧಾನದಲ್ಲಿ ಎರಡು ತೊಂದರೆಗಳು ಒಂದರಲ್ಲೊಂದು ಸೇರಿಕೊಂಡಿದ್ದವು :

1) ಬೇರೆ ಭಾಷೆಗಳ ಬಳಕೆಯಾಗದ್ದರಿಂದ ಇಂಗ್ಲಿಷ್ ಬಳಕೆ ಕಡಿಮೆಯಾಗಲಿಲ್ಲ.

2) ಇಂಗ್ಲಿಷಿಗೆ ಬದಲಾಗಿ ಜಾರಿಗೆ ತಂದುದು ಪ್ರಾದೇಶಿಕ ಭಾಷೆಗಳನ್ನಲ್ಲ; ಹಿಂದಿಯನ್ನು. ಆದ್ದರಿಂದ ಹಿಂದೀತರ ಪ್ರಾಂತಗಳು ಹಿಂದಿಗೆ ವಿರೋಧವಾಗಿ ನಿಂತವು; ಅವು ಇಂಗ್ಲಿಷ್ ಪರವಾಗಿ ನಿಂತದ್ದರಿಂದ ಇಂಗ್ಲಿಷಿನ ಮುಂದುವರಿಕೆಯೂ ಅನಿವಾರ್ಯವಾಯಿತು. 1963 ರಲ್ಲಿ ಅಧಿಕೃತ ಭಾಷಾ ಕಾಯಿದೆ ಜಾರಿಗೆ ಬಂದಾಗ, 'ಸಂವಿಧಾನ ಜಾರಿಯ ದಿನದಿಂದ ಹದಿನೈದು ವರ್ಷಗಳು ಮುಗಿದ ಮೇಲೂ ಹಿಂದಿಯ ಜೊತೆಗೆ ಇಂಗ್ಲಿಷಿನ ಬಳಕೆ ಅಧಿಕೃತ ಉದ್ದೇಶಗಳಿಗಾಗಿ ಮತ್ತು ಸಂಸತ್ತಿನ ಕಲಾಪಗಳಿಗಾಗಿ ಮುಂದುವರಿಯಬಹುದು'[5] ಎಂಬ ನಿಯಮ ಜಾರಿಗೆ ಬಂತು. ಇದರ ಮೂಲಕ ಇಂಗ್ಲಿಷ್ ಆಡಳಿತ ಭಾಷೆಯಾಗಿಯೂ, ಸಂಪರ್ಕ ಭಾಷೆಯಾಗಿಯೂ ಮುಂದುವರಿಯಿತು; ಪ್ರಾದೇಶಿಕ ಭಾಷೆಗಳ ಮೇಲೆ ಅದರ ಹಿಡಿತವೂ ಮುಂದುವರಿಯಿತು.

ಭಾಷಾವಾರು ಪ್ರಾಂತಗಳ ರಚನೆಯಾದ ಬಳಿಕವೂ ಕೇಂದ್ರದ ಭಾಷಾನೀತಿಯಲ್ಲಿ ಹೆಚ್ಚು ಮಾರ್ಪಾಟಾಗಲಿಲ್ಲ. ಪ್ರಾದೇಶಿಕ ಭಾಷೆಗಳಲ್ಲಿ ಆಡಳಿತ, ಶಿಕ್ಷಣ, ನ್ಯಾಯಾಲಯಗಳನ್ನು ನಡೆಸಲು ಅವಕಾಶ ನೀಡಲಾಯಿತು; 'ನಡೆಸತಕ್ಕದ್ದು' ಎಂದು ಕಡ್ಡಾಯಗೊಳಿಸಲಿಲ್ಲ. ಕೇಂದ್ರದಲ್ಲಿ ಮಾತ್ರ ಎಲ್ಲವೂ 'ಹಿಂದಿಯಲ್ಲಿರತಕ್ಕದ್ದು' — ಎಂದು ಕಡ್ಡಾಯಗೊಳಿಸಿತು. ಇದರ ಪರಿಣಾಮ — ಕೇಂದ್ರದಲ್ಲಿ ಹಿಂದಿ ಅತ್ಯಂತ ಅನಿವಾರ್ಯ ಹಾಗೂ ಪ್ರಾಂತಗಳಲ್ಲಿ ಪ್ರಾದೇಶಿಕ ಭಾಷೆಗಳು ಅದರಷ್ಟು ಅನಿವಾರ್ಯವಲ್ಲವೆಂಬ ಪರಿಸ್ಥಿತಿಯ ನಿರ್ಮಾಣವಾಯಿತು. ಅದರೊಂದಿಗೆ ಹಿಂದಿಯನ್ನು ಭಾರತದ ಎಲ್ಲೆಡೆ ಹೇರಲು ಹಲವು ರೀತಿಯ ತಂತ್ರಗಳನ್ನು ರೂಪಿಸಲಾಯಿತು. ತ್ರಿಭಾಷಾಸೂತ್ರ,

ಹಿಂದೀ ವಿಶ್ವವಿದ್ಯಾಲಯ, ಹಿಂದೀ ಪ್ರಚಾರಕ್ಕೆ ವಿಪುಲವಾದ ಆರ್ಥಿಕ ಅನುಕೂಲತೆಗಳು — ಇವೆಲ್ಲವೂ ಹಿಂದೀ ಹೇರಿಕೆಯ ಕೆಲಸವನ್ನೇ ಮಾಡಿದವು. ಕೇಂದ್ರವು ಪ್ರಾದೇಶಿಕ ಭಾಷೆಗಳ ಬೆಳವಣಿಗೆ ಯಾವ ಯೋಜನೆಯನ್ನೂ ಹಾಕಿಕೊಳ್ಳಲಿಲ್ಲ. ಪ್ರಾಂತ ಸರಕಾರಕ್ಕೆ ಹಿಂದಿಯೂ, ಇಂಗ್ಲೀಷೂ ಅನಿವಾರ್ಯವಾಯಿತು; ಪ್ರಾದೇಶಿಕ ಭಾಷೆ ಅಷ್ಟು ಅನಿವಾರ್ಯವಾಗಲಿಲ್ಲ. ತಮಿಳುನಾಡಿನಲ್ಲಿ ಮಾತ್ರ ಪ್ರಾದೇಶಿಕ ಭಾಷೆಯ ಅನಿವಾರ್ಯತೆಯ ಬಗ್ಗೆ ಎಚ್ಚರವುಂಟಾಯಿತು. ಹಿಂದೀ ಹೇರಿಕೆ ಅಲ್ಲಿ ಅಸಾಧ್ಯವಾಯಿತು. ಆದರೆ ಕರ್ನಾಟಕದಲ್ಲಿ ಕನ್ನಡದ ಬಗೆಗೆ ಎಚ್ಚರ ಉಂಟಾದರೂ ಅದು ಜನರ ಧ್ವನಿಯಾಗಲಿಲ್ಲ; ಆದ್ದರಿಂದ ಅದು ನಾಯಕರ, ರಾಜಕೀಯ ಪಕ್ಷಗಳ ಕಾಳಜಿಯ ವಿಷಯವಾಗಲಿಲ್ಲ. ಇಂಗ್ಲಿಷ್ ಭಾಷೆಯೇ ಆಡಳಿತ ಭಾಷೆಯಾಗಿಯೂ, ಪ್ರಾಂತ–ಕೇಂದ್ರದ ಮತ್ತು ಪ್ರಾಂತ–ಪ್ರಾಂತಗಳೊಳಗಿನ ಸಂಪರ್ಕಭಾಷೆಯಾಗಿಯೂ ಮುಂದುವರಿಯಿತು. ಪರಿಣಾಮವಾಗಿ ಇಂಗ್ಲಿಷಿನ ಹಿಡಿತದಲ್ಲಿ ಕನ್ನಡ ಕ್ಷೀಣಿಸುತ್ತ ಬಂತು.

ಸ್ವಾತಂತ್ರ್ಯನಂತರ ಭಾರತದಲ್ಲಿ ಉಂಟಾದ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಆಯಾ ಸನ್ನಿವೇಶಗಳಿಗೆ ಸಂಬಂಧಿಸಿಯೂ ಅದರಿಂದ ಬೇರೆಯಾಗಿಯೂ ಕನ್ನಡ ಚಿಂತಕರಲ್ಲಿ ಕಾಣಿಸಿಕೊಂಡ ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತ ಚಿಂತನೆಗಳೇನು, ಅವುಗಳ ಇತಿಮಿತಿಗಳೇನು ಹಾಗೂ ಅವುಗಳು ಇಂದು ಎಷ್ಟರಮಟ್ಟಿಗೆ ಉಪಯುಕ್ತವಾಗಬಲ್ಲವು — ಎಂಬುದನ್ನು ಕಂಡುಕೊಳ್ಳುವುದು ಇಲ್ಲಿ ಅವಶ್ಯವೆನಿಸುತ್ತದೆ. ಸ್ವಾತಂತ್ರ್ಯಕ್ಕೆ ಮೊದಲು ನಡೆದ ಚಿಂತನೆಗಳೊಂದಿಗೆ ಈ ಚಿಂತನೆಗಳನ್ನು ತುಲನೆ ಮಾಡುವ ಮೂಲಕ ಹೊಸ ವಿಚಾರಗಳನ್ನು ಕಂಡುಕೊಳ್ಳುವ ಪ್ರಯತ್ನ ಇಲ್ಲಿನದು.

ಸ್ವಾತಂತ್ರ್ಯಪೂರ್ವದ ಚಿಂತನೆಗಳಲ್ಲಿ ಮುಖ್ಯವಾಗಿ 1) ಕನ್ನಡದ ಬೆಳವಣಿಗೆಗೆ ಇಂಗ್ಲಿಷಿನ ಅವಶ್ಯಕತೆ 2) ಕನ್ನಡಕ್ಕೆ ಅಡ್ಡಿಯಾಗಬಹುದಾದ ಇಂಗ್ಲಿಷ್ ವ್ಯಾಮೋಹದ ನಿರಾಕರಣೆ 3) ಆಡಳಿತ, ಶಿಕ್ಷಣ, ನ್ಯಾಯಾಲಯ ವ್ಯವಹಾರಗಳಲ್ಲಿ ಕನ್ನಡಕ್ಕೇ ಪ್ರಾಧಾನ್ಯತೆ 4) ಅಪಾಯದ ಮುನ್ನೆಚ್ಚರಿಕೆಯನ್ನು ಅರಿತುಕೊಂಡೂ ರಾಷ್ಟ್ರಭಾಷೆಯಾಗಿ ಹಿಂದಿಯ ಸ್ವೀಕಾರ — ಇವಿಷ್ಟು ವಿಚಾರಗಳು ಬಂದಿವೆ. ಇದಕ್ಕೆ ಕಾರಣ ಕೂಡ ಸ್ಪಷ್ಟವಾಗಿದೆ: ಸ್ವಾತಂತ್ರ್ಯದ ಅವಶ್ಯಕತೆಯ ಅಂಗವಾಗಿ ಬಂದ ರಾಷ್ಟ್ರೀಯ

ಭಾವನೆ; ಆದರೊಂದಿಗೆ ಕರ್ನಾಟಕ ಏಕೀಕರಣವೂ ಸೇರಿಕೊಂಡಾಗ ಉಂಟಾದ ಭಾಷಾಭಿಮಾನ ಹಾಗೂ ಭಾಷಾಜಾಗೃತಿ; ಆಧುನಿಕ ವಿಚಾರಗಳ ಪ್ರಭಾವ ಮತ್ತು ಹೊಸತನ್ನು ಕಟ್ಟುವ ಉತ್ಸಾಹ.

ಸ್ವಾತಂತ್ರ್ಯಾನಂತರದ ಚಿಂತನೆಯಲ್ಲಿ ಈ ಅಂಶಗಳು ಪ್ರಮುಖವಾಗಿ ಬಂದಿವೆ :

1) ಹಿಂದಿ, ಇಂಗ್ಲಿಷ್ ಹಾಗೂ ಪ್ರಾದೇಶಿಕ ಭಾಷೆಗಳ ನಡುವಿನ ಗೊಂದಲ
2) ಇಂಗ್ಲಿಷ್ ಮಾಧ್ಯಮ ಶಾಲೆಗಳು ಹಾಗೂ ಇಂಗ್ಲಿಷ್ ವ್ಯಾಮೋಹದ ಸಮಸ್ಯೆ
3) ಅಲ್ಪಸಂಖ್ಯಾತರು, ವಲಸೆ,— ಇವುಗಳಿಂದ ಉಂಟಾಗುವ ತೊಂದರೆಗಳು
4) ಕನ್ನಡದ ಅನುಷ್ಠಾನ ಹೇಗೆ ಎಂಬ ವಿಚಾರ
5) ಒಟ್ಟಿನಲ್ಲಿ ಇಂಗ್ಲಿಷ್ — ಕನ್ನಡ ಸಂಬಂಧ ಹೇಗಿರಬೇಕು, ಹೇಗಿರಬೇಡ

— ಈ ಐದು ವಿಷಯಗಳಲ್ಲಿ ಕನ್ನಡ ಚಿಂತಕರು ವ್ಯಕ್ತಪಡಿಸುವ ಅಭಿಪ್ರಾಯಗಳನ್ನು ಪರಸ್ಪರ ಹೋಲಿಸಿ ವಿಶ್ಲೇಷಣೆ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ.

## 1. ಹಿಂದಿ, ಇಂಗ್ಲಿಷ್ ಹಾಗೂ ಪ್ರಾದೇಶಿಕ ಭಾಷೆಗಳ ನಡುವಿನ ಗೊಂದಲ

ಸ್ವಾತಂತ್ರ್ಯ ದೊರಕಿದ ಹುಮ್ಮಸ್ಸಿನಲ್ಲಿ ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡಿದಾಗ ಹಿಂದಿ, ಇಂಗ್ಲಿಷ್, ಪ್ರಾದೇಶಿಕ ಭಾಷೆ — ಈ ಮೂರರ ನಡುವಿನ ಗೊಂದಲವನ್ನು ಹಿಂದೀತರ ರಾಜ್ಯಗಳು ಗಂಭೀರವಾಗಿ ಪರಿಗಣಿಸಿದವು. ಪ್ರಾದೇಶಿಕ ಭಾಷೆಗೆ ಪ್ರಾಧಾನ್ಯತೆಯನ್ನು ನೀಡಬೇಕಾದ ಅನಿವಾರ್ಯತೆ ಒಂದೆಡೆ, ಇಂಗ್ಲಿಷನ್ನು ಬಿಡಬೇಕೇ ಬೇಡವೇ ಎಂಬ ದ್ವಂದ್ವ ಇನ್ನೊಂದೆಡೆ, ರಾಷ್ಟ್ರಭಾಷೆಯಾಗಹೊರಟಿರುವ ಹಿಂದೀ ಭಾಷೆ ಪರೋಕ್ಷವಾಗಿ ಹುಟ್ಟಿಸುವ ಭಯ ಇನ್ನೊಂದೆಡೆ — ಈ ಮೂರು ಸಂಗತಿಗಳಿಗೆ ಕನ್ನಡ ಚಿಂತಕರು ಹಲವು ಬಗೆಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಇಂದಿನವರೆಗೆ ಈ ಮೂರು ಭಾಷೆಗಳ ನಡುವಿನ ಗೊಂದಲದ ಬಗ್ಗೆ ಚಿಂತಿಸಿದವರ ಅಭಿಪ್ರಾಯಗಳಲ್ಲಿ ಕಾಲಾನುಕ್ರಮ ಬದಲಾವಣೆಗಳಾಗಿದ್ದರೂ, ಪ್ರತಿಯೊಬ್ಬ ಚಿಂತಕ ಸಮಸ್ಯೆಗಳಿಗೆ ಪ್ರತಿಕ್ರಿಯಿಸಿದ ರೀತಿ, ಅವನವನ ಕೇಂದ್ರಪ್ರಜ್ಞೆಯ ಗ್ರಹಿಕೆಗನುಗುಣವಾಗಿಯೇ ಇದೆ — ಎಂದು ಭಾವಿಸಬಹುದು. ಇದನ್ನು ಗಮನಿಸುವಾಗ

ಈ ಚಿಂತನೆಗಳಲ್ಲಿ ಸ್ಥೂಲವಾಗಿ ನಾಲ್ಕು ಬಗೆಯ ಸ್ವಭಾವಗಳು ಕಾಣುತ್ತವೆ.
1) ರಾಷ್ಟ್ರೀಯತೆಗೆ ಪ್ರಾಧಾನ್ಯ 2) ಪ್ರಾದೇಶಿಕತೆಗೆ ಪ್ರಾಧಾನ್ಯ 3) ಸಮನ್ವಯ ದೃಷ್ಟಿಕೋನ 4) ಹೇರಿಕೆಗೆ ವಿರೋಧ. ಈ ನಾಲ್ಕು ಸ್ವಭಾವಗಳು ಎಲ್ಲರ ಚಿಂತನೆಗಳಲ್ಲಿಯೂ ಕಂಡುಬರುತ್ತವೆ; ಆದರೆ ಒಬ್ಬೊಬ್ಬರಲ್ಲಿ ಒಂದೊಂದು ಸ್ವಭಾವದ ಪ್ರಮಾಣ ಹೆಚ್ಚಾಗಿದ್ದು, ಉಳಿದವು ಅಮುಖ್ಯವಾಗಿದ್ದರೂ, ಅವುಗಳಿದ್ದವು — ಎನ್ನುವುದನ್ನು ಮರೆಯುವಂತಿಲ್ಲ. ಆದರೆ ಇಲ್ಲಿ ಅಗತ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಈ ನಾಲ್ಕು ಬಗೆಯ ಚಿಂತನೆಗಳಲ್ಲಿ ಇರುವುದು ಸೂಕ್ಷ್ಮ ವ್ಯತ್ಯಾಸವಾದರೂ, ಪರಿಣಾಮದಲ್ಲಿ ಅವುಗಳು ಅತ್ಯಂತ ಭಿನ್ನವಾಗಿರುತ್ತವೆ — ಎಂಬುದು. ಹೆಚ್ಚುಕಡಿಮೆ ಮೇಲೆ ಕೊಟ್ಟಿರುವ ಕ್ರಮದಲ್ಲೇ ಈ ನಾಲ್ಕು ಬಗೆಯ ಚಿಂತನೆಗಳು ಕಾಲಾನುಕ್ರಮವಾಗಿ ಬದಲಾಗುತ್ತ ಬಂದಿವೆ. 1956 ರಲ್ಲಿ ಭಾಷಾವಾರು ಪ್ರಾಂತವಿಂಗಡನೆಯಾಗುವುದಕ್ಕೆ ಮೊದಲಿನ ಚಿಂತನೆಗಳಲ್ಲಿ ಹೆಚ್ಚಾಗಿ ಮೊದಲ ಎರಡು ಸ್ವಭಾವಗಳನ್ನೂ ಅನಂತರದಲ್ಲಿ ಮುಂದಿನ ಎರಡು ಸ್ವಭಾವಗಳನ್ನೂ ಕಾಣಬಹುದು.

1. <u>ರಾಷ್ಟ್ರೀಯತೆ</u>: ಸ್ವಾತಂತ್ರ್ಯ ದೊರಕಿದ ಬಳಿಕ ಸ್ವಲ್ಪ ಕಾಲ ರಾಷ್ಟ್ರೀಯತೆಯ ಕಾವು ಜನಮನದಲ್ಲಿ ಇದ್ದುದರಿಂದ ಅವರ ಚಿಂತನೆಗಳೂ ಅಭಿವ್ಯಕ್ತಿಗಳೂ ಸಹಜವಾಗಿ ರಾಷ್ಟ್ರಕಲ್ಪನೆ ಹಾಗೂ ರಾಷ್ಟ್ರಾಭಿಮಾನದಿಂದ ಪ್ರೇರಿತವಾಗಿದ್ದುವು. ಇಂಗ್ಲಿಷರು ಹೋದ ಬಳಿಕ ಭಾರತೀಯ ಭಾಷೆಗಳ ಸ್ಥಾನಮಾನದ ವಿಷಯವಾಗಿ ವಾದವಿವಾದಗಳೂ ಚಿಂತನೆಗಳೂ ನಡೆಯುತ್ತಿದ್ದಾಗ ಒಟ್ಟು ಭಾರತಕ್ಕೆ, ಅದರ ಏಕತೆಗೆ ಅನುಕೂಲವಾಗುವಂತೆ ಭಾಷೆಗಳಿಗೆ ಪ್ರಾಮುಖ್ಯತೆ ನೀಡಬೇಕೆಂಬ ಅಭಿಪ್ರಾಯ ರೂಪುಗೊಂಡಿತ್ತು. ಕನ್ನಡ ಚಿಂತಕರಲ್ಲಿ ಮುಖ್ಯವಾಗಿ ಉತ್ತಂಗಿ ಚೆನ್ನಪ್ಪ, ಎಂ. ಆರ್. ಶ್ರೀ., ಎಸ್. ಸಿ. ನಂದೀಮಠ, ಕುವೆಂಪು, ರಂ. ಶ್ರೀ. ಮುಗಳಿ, ಕಡೆಂಗೋಡ್ಲು, ಮಾಸ್ತಿ, ಗೋರೂರು — ಇವರು ಹಿಂದೀ ಭಾಷೆ ಭಾರತದ ಏಕತೆಗೆ ಸಂಪರ್ಕ ಭಾಷೆಯಾಗಿ ಇರಲಿ ಎಂದು ಅಭಿಪ್ರಾಯಪಡುತ್ತಾರೆ. ಇವರಲ್ಲಿ ಗಾಂಧೀಜಿಯವರ ವಿಚಾರಗಳು ಉಂಟುಮಾಡಿದ ಪ್ರಭಾವ ಗಮನಾರ್ಹ. ಗಾಂಧೀಜಿಯವರ ಪ್ರಕಾರ ಹಿಂದೀ ಭಾಷೆಯೇ ಭಾರತದ ರಾಷ್ಟ್ರಭಾಷೆಯಾಗಬೇಕು; ಅದೇ ಪ್ರಾಂತ-ಪ್ರಾಂತಗಳ ನಡುವಿನ ಸಂಪರ್ಕಭಾಷೆಯಾಗುವ ಮೂಲಕ ದೇಶದ ಏಕತೆಗೆ ಕಾರಣವಾಗಬೇಕು.

ಇವರ ಚಿಂತನೆಗಳನ್ನು ಸ್ಥೂಲವಾಗಿ ಎರಡಾಗಿ ವಿಭಾಗಿಸಬಹುದು: ಒಂದು, ರಾಷ್ಟ್ರೀಯ

ಭಾವನೆಯ ಆಧಿಕ್ಯದಿಂದ 'ಹಿಂದೀ ರಾಷ್ಟ್ರಭಾಷೆ; ಹಾಗಾಗಿ ರಾಜಕೀಯ ದೃಷ್ಟಿಯಿಂದ ಹಿಂದಿ ನಮಗೆ ಅಗತ್ಯ' ಎಂದು ಮನಃಪೂರ್ವಕವಾಗಿ ಒಪ್ಪಿಕೊಂಡವರ ಚಿಂತನೆ: ಉತ್ತಂಗಿ ಚೆನ್ನಪ್ಪ, ಕುವೆಂಪು, ರಂ.ಶ್ರೀ. ಮುಗಳಿ — ಮೊದಲಾದವರದು.[6] ಎರಡು, ಹಿಂದೀ ರಾಷ್ಟ್ರಭಾಷೆಯಾಗುವುದರಿಂದ ಪ್ರಾದೇಶಿಕ ಭಾಷೆಗಳಿಗಾಗಬಹುದಾದ ತೊಂದರೆಗಳನ್ನೂ ಹಿಂದೀಯರು ಮತ್ತು ಹಿಂದೀತರರ ನಡುವೆ ಉಂಟಾಗಿರುವ ವಿವಾದಗಳನ್ನೂ ಗಮನಿಸಿ, ಪ್ರಾದೇಶಿಕ ಭಾಷೆಗಳಿಗೆ ತೊಂದರೆಯುಂಟಾಗದಂತೆ ರಾಷ್ಟ್ರಭಾಷೆಯಾಗಿ ಹಿಂದೀ ಇರಲಿ ಎಂದು ಹೇಳುವವರ ಚಿಂತನೆ: ಎಂ.ಆರ್.ಶ್ರೀ, ಶಿ.ಚಿ. ನಂದೀಮಠ, ಕಡೆಂಗೋಡ್ಲು ಶಂಕರಭಟ್ಟ[7] ಹಾಗೂ ಮಾಸ್ತಿ.[8]

ಇವರಲ್ಲಿ ಮೊದಲನೆಯವರು ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಸ್ವೀಕರಿಸ ಬೇಕು ಎನ್ನುತ್ತಾರೆ; ಶಿಕ್ಷಣದಲ್ಲಿ ಐಚ್ಛಿಕವಾಗಿ ಅದು ಇರಬೇಕು ಎನ್ನುತ್ತಾರೆ. ಇಲ್ಲಿ, ಹಿಂದೀ ಹೇರಿಕೆಯಿಂದ ಉಂಟಾಗುವ ಹಾನಿಯನ್ನು ಅಷ್ಟಾಗಿ ಹೇಳುವುದಿಲ್ಲ. ಆರಂಭದಲ್ಲಿ ಕುವೆಂಪುರವರ ಚಿಂತನೆ ಈ ರೀತಿಯಲ್ಲಿದ್ದರೂ[9] ತಮ್ಮ ಅನಂತರದ ಲೇಖನ, ಭಾಷಣ ಗಳಲ್ಲಿ ಹಿಂದೀ ಹೇರಿಕೆಯನ್ನು ವಿರೋಧಿಸುತ್ತಾರೆ.[10]

ಎರಡನೆಯವರು ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡುವಾಗ, ಅದು ಪ್ರಾದೇಶಿಕ ಭಾಷೆಗಳಿಗೆ ಹಾನಿಯುಂಟುಮಾಡಬಾರದು; ಶಿಕ್ಷಣದಲ್ಲಿ ಕಡ್ಡಾಯವಾಗಿ ಬರಕೂಡದು — ಎಂದು ಅಭಿಪ್ರಾಯಪಡುತ್ತಾರೆ. ಹಿಂದೀತರರು 'ಹಿಂದೀ ಬೇಡ' ಎಂದದ್ದನ್ನೂ, ಅದಕ್ಕಾಗಿ ಅವರನ್ನು ಹಿಂದೀಯರು 'ರಾಷ್ಟ್ರದ್ರೋಹಿಗಳು' ಎಂದು ಕರೆದದ್ದನ್ನೂ ಇವರು ಅತಿರೇಕದ ವಿವಾದವಾಗಿ ಪರಿಗಣಿಸುತ್ತಾರೆ. ಅದರಿಂದ ಭಾರತದ ಏಕತೆಗೂ, ಗಾಂಧೀಜಿಯವರ ಕಲ್ಪನೆಗೂ, ಎಲ್ಲ ಭಾಷೆಗಳಿಗೂ ಉಂಟಾಗಬಹುದಾದ ಕೆಡುಕಿನ ಬಗ್ಗೆ ಎಚ್ಚರಿಕೆ ನೀಡುತ್ತಾರೆ.

ಇವುಗಳ ನಡುವೆ ಇಂಗ್ಲಿಷ್ ಭಾಷೆಯ ಸ್ಥಾನದ ಕುರಿತು ಇವರಲ್ಲಿ ಎರಡು ಅಭಿಪ್ರಾಯ ಗಳಿವೆ. 1) ಇಂಗ್ಲಿಷ್ ಪರದೇಶದ ಭಾಷೆಯಾದ್ದರಿಂದ ಅದು ರಾಷ್ಟ್ರಭಾಷೆಯಾಗುವುದು ಸರಿಯಲ್ಲ. ಪ್ರಾದೇಶಿಕ ಭಾಷೆ; ಹಿಂದೀ; ಅನಂತರವೇ ಇಂಗ್ಲಿಷಿಗೆ ಸ್ಥಾನ 2) ಇಂಗ್ಲಿಷ್ ಪರದೇಶದ ಭಾಷೆಯಾಗಿದ್ದರೂ, ಅದರಿಂದ ಭಾರತೀಯ ಭಾಷೆಗಳಿಗೂ ಅಂತರರಾಷ್ಟ್ರೀಯ

ವ್ಯವಹಾರಗಳಿಗೂ ಲಾಭವಿದೆ; ಆದರೆ ಅದು ಪ್ರಾದೇಶಿಕ ಭಾಷೆ, ಹಿಂದೀಗಳಿಗಿಂತ ಮುಖ್ಯ
ವಾಗಬಾರದು.

2. ಪ್ರಾದೇಶಿಕತೆ: ರಾಷ್ಟ್ರೀಯತೆಗೆ ಪ್ರಾಮುಖ್ಯತೆಯನ್ನು ನೀಡಿದವರು
ಪ್ರಾದೇಶಿಕತೆಯನ್ನು ಕಡೆಗಣಿಸುವ ಪ್ರವೃತ್ತಿ ಬೆಳೆದಂತೆ, ಅದರಿಂದಾಗುವ ಅಪಾಯವನ್ನು
ಮನಗಂಡ ಚಿಂತಕರು ಪ್ರಾದೇಶಿಕ ಭಾಷೆಯ, ಪ್ರಾದೇಶಿಕತೆಯ ಅಗತ್ಯವನ್ನು ಕುರಿತು
ಮತ್ತು ರಾಷ್ಟ್ರಭಾಷೆ ಹಾಗೂ ಪ್ರಾಂತಭಾಷೆಗಳಿಗೆ ನೀಡಬೇಕಾದ ಸ್ಥಾನಮಾನದ ಕುರಿತು
ಚಿಂತನೆ ನಡೆಸಿದ್ದಾರೆ. ಹಿಂದಿಯನ್ನು ರಾಷ್ಟ್ರಭಾಷೆ ಎಂದು ಒಪ್ಪಿಕೊಂಡವರಲ್ಲಿ ಕೆಲವರೂ
ಕೂಡ ಅದರಿಂದ ಪ್ರಾದೇಶಿಕತೆಗೆ ಆಗಬಹುದಾದ ತೊಂದರೆಯನ್ನು ಗಮನಿಸಿದ್ದಾರೆ.
ಇವರಲ್ಲಿ ರಾಷ್ಟ್ರೀಯತೆಗಿಂತ ಪ್ರಾದೇಶಿಕತೆಯೇ ಪ್ರಧಾನವಾಗಿದೆ. ಸ್ವಾತಂತ್ರ್ಯನಂತರದ
ಈ ಬಗೆಯ ಚಿಂತನೆ ದೇಶದಲ್ಲಿ ಒಂದು ಮುಖ್ಯ ಬೆಳವಣಿಗೆಯಾಗಿದೆ; ಆದರೆ ಭಾಷಾಸಮಸ್ಯೆ
ಗಳ ವಿಚಾರದಲ್ಲಿ ರಾಷ್ಟ್ರೀಯತೆ ಮತ್ತು ಪ್ರಾದೇಶಿಕತೆಯ ಸಮಸ್ಯೆ ಬಹಳ ದೊಡ್ಡ
ದುರಂತಕ್ಕೆ ಕಾರಣವಾದುದೂ ಸತ್ಯ. ಸ್ವಾತಂತ್ರ್ಯಕ್ಕೆ ಮೊದಲಿನ ಚಿಂತಕರಿಗೆ ಇದೊಂದು
ದೊಡ್ಡ ಸಮಸ್ಯೆಯೆಂದು ಅನ್ನಿಸಲಿಲ್ಲ. ಪ್ರಾದೇಶಿಕ ಭಾಷೆ ಹಾಗೂ ಇನ್ನಿತರ ಸಾಂಸ್ಕೃತಿಕ
ವೈವಿಧ್ಯತೆಗಳು ಭಾರತದ ಏಕತೆಗೆ ಪೂರಕವಾಗಿದ್ದವು; ಅವುಗಳು 'ಪರಕೀಯ' ವಾದ ಭಾಷೆ
ಯೊಂದರಿಂದ ಪ್ರತ್ಯೇಕವಾಗಿ ಗುರುತಿಸಲ್ಪಟ್ಟವು. ಆದ್ದರಿಂದ ವೈವಿಧ್ಯತೆಯೇನಿದ್ದರೂ
'ಸ್ವದೇಶಿ' ಅನ್ನಿಸಿಕೊಂಡವು. ಸ್ವಾತಂತ್ರ್ಯನಂತರ ವೈವಿಧ್ಯತೆ ಹಾಗೂ ಏಕತೆಗಳ ನಡುವಿನ
ಸಂಘರ್ಷ ಆರಂಭವಾಯಿತು. ದೇಶದ ಮುಖ್ಯ ಭಾಷೆಗಳನ್ನು ಶಾಸನದಲ್ಲಿ ಸೇರಿಸಿದರೂ
ಹಿಂದಿಗೆ ಮಾತ್ರವೇ 'ರಾಷ್ಟ್ರಭಾಷೆ' ಎಂಬ ಪದವಿ ದೊರೆತುದು ಈ ಸಂಘರ್ಷಕ್ಕೆ ಕಾರಣ
ವಾಯಿತು. ರಾಷ್ಟ್ರೀಯತೆಯ ಸಂಕೇತವಾಗಿದ್ದ ಹಿಂದಿಯು, ಈಗ ಹೇರಿಕೆಯ
ಸಾಧನವಾದುದನ್ನು ಹಿಂದೀತರ ರಾಜ್ಯಗಳು ಅರ್ಥಮಾಡಿಕೊಂಡವು. ಭಾಷೆಗಳ ಕುರಿತ
ಒಡಕು ಉಂಟಾದುದು ಇಲ್ಲೇ. ಹಿಂದೀ ರಾಷ್ಟ್ರಭಾಷೆಯಾದರೆ ಉಳಿದವು ಅದರ ಅಧೀನದಲ್ಲಿರ
ಬೇಕು ಎಂಬ ಕೀಳರಿಮೆಯೂ, ಭಾಷಾ ಬೆಳವಣಿಗೆಯ ದೃಷ್ಟಿಯಿಂದ ಉಳಿದ ಭಾಷೆಗಳಿಗೆ
ಹೆಚ್ಚಿನದಲ್ಲದ ಒಂದು ಪ್ರಾದೇಶಿಕ ಭಾಷೆ ಅವೆಲ್ಲವಕ್ಕಿಂತಲೂ ವಿಶೇಷ ಸ್ಥಾನ, ಸವಲತ್ತು
ಗಳನ್ನು ಪಡೆಯುವುದೆಂಬ ಎಚ್ಚರವೂ ಹಿಂದೀತರ ಭಾಷೆಗಳ ಚಿಂತಕರಲ್ಲಿ ಉಂಟಾದುದು ಸಹಜ.

ಎಂ. ಆರ್. ಶ್ರೀ., ವಿ. ಸೀ., ರಂ. ಶ್ರೀ. ಮುಗಳಿ, ಕುವೆಂಪು, ಕಾರಂತ—

ಇವರು 'ರಾಷ್ಟ್ರಭಾಷೆ' ಯಾಗಿ ಹಿಂದಿಯನ್ನು ಸ್ವೀಕರಿಸುವಲ್ಲಿ ಇರಬೇಕಾದ ನೀತಿ ಯನ್ನು ಗಮನಿಸಬೇಕು — ಎನ್ನುತ್ತಾರೆ. ಇವರೆಲ್ಲರ ಅಭಿಪ್ರಾಯಗಳಲ್ಲಿ, ಹಿಂದೀ ರಾಷ್ಟ್ರಭಾಷೆಯಾದಾಗ ಅದು ಉಳಿದ ಪ್ರಾದೇಶಿಕ ಭಾಷೆಗಳಿಗಿಂತ ಹೆಚ್ಚಿನ ಸವಲತ್ತುಗಳನ್ನು ಪಡೆಯಬಹುದು ಹಾಗೂ ಉಳಿದ ಭಾಷೆಗಳ ಮೇಲೆ ದಬ್ಬಾಳಿಕೆ ನಡೆಸಬಹುದೆಂಬ ಎಚ್ಚರವಿದೆ. ಕ್ರಮೇಣ ಇವರು, ಉಳಿದ ಭಾಷೆಗಳೂ ರಾಷ್ಟ್ರಭಾಷೆಗಳೇ; ಹಿಂದಿ ಕೇವಲ ಸಂಪರ್ಕ ಭಾಷೆ ಮಾತ್ರ — ಎಂಬ ವಿಚಾರಕ್ಕೆ ಒತ್ತು ನೀಡುತ್ತಾರೆ. ಮೊದಲು 'ಹಿಂದೀ ರಾಷ್ಟ್ರಭಾಷೆ' ಎಂದು ಒಪ್ಪಿಕೊಳ್ಳಬೇಕು — ಎಂದವರೇ, ಅನಂತರ 'ಉಳಿದ ಪ್ರಾದೇಶಿಕ ಭಾಷೆಗಳೂ ರಾಷ್ಟ್ರಭಾಷೆಗಳೇ' ಎಂದು ಹೇಳಿದ್ದಾರೆ. ಮಾಸ್ತಿಯವರು ಆಗ ಉಂಟಾಗಿದ್ದ ಗೊಂದಲ ವನ್ನು ಹೀಗೆ ವಿವರಿಸುತ್ತಾರೆ:

"ಹಿಂದಿ ಭಾಷೆಯನ್ನು ರಾಷ್ಟ್ರಭಾಷೆ ಎಂದು ಮೊದಲು ಹೆಸರಿಟ್ಟು ಕರೆದವರು ಗಾಂಧೀಜಿ. ಹಾಗೆನ್ನುವುದರಲ್ಲಿ ಅವರರ್ಥ ಇಂಗ್ಲೀಷು ಪರಭಾಷೆ ಹಿಂದಿ ನಮ್ಮದು ಎನ್ನುವುದು. ಈ ಅರ್ಥದಲ್ಲಿ ಭರತವರ್ಷದ ಇನ್ನೆಲ್ಲ ಭಾಷೆಯೂ ರಾಷ್ಟ್ರಭಾಷೆಯೇ, ಯಾವುದೂ ಪರಭಾಷೆಯಲ್ಲ. ಈ ತಮ್ಮ ಭಾವನೆಯನ್ನು ಗಾಂಧೀಜಿ ಬಹುಸಲ ಸ್ಪಷ್ಟಪಡಿಸಿದರು. ಒಂದೊಂದು ಪ್ರಾಂತದಲ್ಲೂ ಅಲ್ಲಿಯ ಭಾಷೆ ಜೀವನದ ಸಮಸ್ತ ವ್ಯವಹಾರದಲ್ಲೂ ಬಳಕೆಗೆ ಬರಬೇಕು, ಹೀಗೆ ಒಂದೊಂದು ಭಾಷೆಯೂ ಭರತವರ್ಷದ ಇತರ ಎಲ್ಲ ಭಾಷೆ ಗಳಷ್ಟೇ ಎತ್ತರಕ್ಕೆ ಏರಬೇಕು, ಎಲ್ಲ ಪ್ರಾಂತದ ಎಲ್ಲ ಜನರ ಅರಿವು, ಬಾಳ್ವೆ ಅಕುಂಠಿತ ವಾಗಿ ಒಂದೇ ಎತ್ತರಕ್ಕೆ ಏರಬೇಕು, ಎಂಬ ತಮ್ಮ ಬಯಕೆಯನ್ನು ಪ್ರಕಟಮಾಡಿದರು. ಹಿಂದಿ 'ಕಾಮನ್ ಲಾಂಗ್ವೇಜ್' ಅಥವಾ 'ಫೆಡರಲ್ ಲಾಂಗ್ವೇಜ್' ಆಗಿ ಬಳಕೆಗೆ ಬರಬೇಕು."

"... ಭರತವರ್ಷದ ಜನಜೀವನದಲ್ಲಿ ಇಂಗ್ಲೀಷ್ ಇಂದಿನ ಸ್ಥಾನವನ್ನು ಪಡೆದಿರುವುದು ಸಾಧ್ಯವಲ್ಲ ಎನ್ನುವ ಸುಸ್ಪಷ್ಟ ಸತ್ಯವನ್ನು ಕಾಣಲಾರದೆ ಆಂಗ್ಲಭಾಷಾ ಜ್ಞಾನದಿಂದ ... ಇರುಳುಗಣ್ಣರಾದ ನಮ್ಮ ನಾಯಕರು ಆಂಗ್ಲಭಾಷೆಯನ್ನು ಬಿಟ್ಟರೆ ಭರತವರ್ಷದಲ್ಲಿ ಪ್ರೌಢ ವಿದ್ಯಾಭ್ಯಾಸ ಸಾಧ್ಯವಲ್ಲ ಎಂದರು. ರಾಷ್ಟ್ರಭಾಷೆ ಎಂಬ ಶಬ್ದಜಾಲದಿಂದ ಮುಗ್ಧ ರಾದ ಹಿಂದೀಪ್ರೇಮಿ ಬೇರೆ ಇರುಳುಗಣ್ಣರು ಭರತವರ್ಷದ ಆದ್ಯಂತ ಹಿಂದೀ ಭಾಷೆಯಲ್ಲಿ ಉನ್ನತ ವಿದ್ಯೆ ನಡೆಯಬೇಕು ಎಂದರು." [11]

1956 ರಲ್ಲಿ ಭಾಷಾವಾರು ಪ್ರಾಂತಗಳ ರಚನೆಯಾದ ಬಳಿಕ ಹಿಂದೀ ರಾಷ್ಟ್ರಭಾಷೆ, ಉಳಿದವುಗಳು ಪ್ರಾಂತಭಾಷೆಗಳು — ಎಂಬ ಭಾವನೆ ಕೇಂದ್ರದ ನಾಯಕರಲ್ಲಿ ಬಲಗೊಂಡದ್ದೇ ಹಿಂದೀ ವಿರೋಧಿ ಮನೋಭಾವ ಬೆಳೆದು ಬರಲು ಕಾರಣವಾಯಿತು. ಅನಂತರದ ಚಿಂತನೆಗಳಲ್ಲಿ ಈ ಮೊದಲೇ ಹೇಳಿರುವಂತೆ ಎರಡು ರೀತಿಯ ಮನೋಭಾವಗಳನ್ನು ಗುರುತಿಸಬಹುದು. 1) ಸಮನ್ವಯ ದೃಷ್ಟಿಕೋನ 2) ಹೇರಿಕೆಗೆ ವಿರೋಧ.

3. ಸಮನ್ವಯ ದೃಷ್ಟಿಕೋನ: ಹಿಂದಿಯ ಆಕ್ರಮಣಕಾರಿ ಪ್ರವೃತ್ತಿ, ಹಾಗೂ ಹಿಂದಿಯನ್ನು ವಿರೋಧಿಸುವವರ ಇಂಗ್ಲಿಷಪರ ಧೋರಣೆ — ಈ ಎರಡು ಅತಿರೇಕಗಳನ್ನೂ ವಿಮರ್ಶಿಸಿ, ಹಿಂದಿ—ಇಂಗ್ಲಿಷ್—ಕನ್ನಡ ಈ ಮೂರು ಭಾಷೆಗಳು ಎಷ್ಟೆಷ್ಟು ಆವಶ್ಯಕ; ಎಲ್ಲೆಲ್ಲಿ ಹಾನಿಯಾಗುತ್ತದೆ, ಈ ಭಾಷೆಗಳ ನಡುವಿನ ಸಮಸ್ಯೆಗಳ ಪರಿಹಾರವಾಗುವಂತೆ ಹೇಗೆ ಭಾಷಾ ಯೋಜನೆಯನ್ನು ರೂಪಿಸಬೇಕು — ಈ ವಿಷಯಗಳಿಗೆ ಸಂಬಂಧಿಸಿದ ಸಮನ್ವಯ ದೃಷ್ಟಿಕೋನ ಚಿಂತನೆ ಕೆಲವರಲ್ಲಿದೆ.

ಕಡೆಂಗೋಡ್ಲು ಶಂಕರಭಟ್ಟರು, ''ಭಾರತಕ್ಕೆ ಸಂಪರ್ಕ ಭಾಷೆಯೊಂದು ಬೇಕೇ ಬೇಕು. ಇಂಗ್ಲೀಷು ಆ ನೆಲೆಯಲ್ಲಿರುವುದು ಅಸಂಭವ''[12] ಎನ್ನುತ್ತ, ಹಿಂದೀ ಸಂಪರ್ಕ ಭಾಷೆಯಾಗುವ ವಿಷಯದಲ್ಲಿ ಉಂಟಾದ ಸಮಸ್ಯೆಯನ್ನು ಚರ್ಚಿಸುತ್ತಾರೆ:

''ಆಳುವ ಪಕ್ಷಗಳು, ಪಂಗಡಗಳು ಯಾವುವಿದ್ದರೂ, ಒಮ್ಮೆ ಅಧಿಪಟ್ಟವನ್ನೇರಿದ ಭಾಷೆಯ ಪ್ರಭುತ್ವವು ಶಾಶ್ವತವಾಗಿಯೇ ಉಳಿಯುವುದು. ಆ ಭಾಷಾ ಪ್ರಜೆಗಳಿಗೆ ಇತರರಿಗಿಂತ ಸುಲಭವಾಗಿ ರಾಜ್ಯದ ಸರ್ವಾಂಗಗಳಲ್ಲಿ ಸಂದರ್ಭಾವಕಾಶಗಳು ಲಭಿಸುತ್ತವೆ. ಇದರ ಪರಿಣಾಮವಾಗಿ ಅವರಲ್ಲಿ ಉಚ್ಚತಾ ಪ್ರತಿಪತ್ತಿಯುಂಟಾಗುತ್ತದೆ. ಪ್ರಜೆಗಳಲ್ಲಿ ಆಳುವ ವರ್ಗವೆನ್ನುವ ವಿಶಿಷ್ಟ ಜಾತಿ ಹುಟ್ಟುವುದು ಹೀಗೆಯೇ. ಹಿಂದಿ ಭಾಷಾ ವಿರೋಧಕ್ಕೆ ಈ ಭಯವೇ ಕಾರಣ. ಹಿಂದಿಯ ಮೂಲಕವಾಗಿ ಸಂಚಾಲಿತವಾಗುವ ಅಧಿಕಾರ — ಅದರ ಸ್ಥಾಪನೆ — ಅದರಿಂದ ದೊರೆಯುವ ಪ್ರತಿಷ್ಠೆ — ಲಾಭ — ಪ್ರಭುತ್ವ — ಈ ಸಂಭವಗಳೇ ಭಯಾವಹವಾಗಿವೆ. ಬರಿಯ ಭಾಷೆ ಏನೂ ಮಾಡಿಲ್ಲ, ಮುಂದೆ ಏನೂ ಮಾಡುವಂತಿಲ್ಲ. ಇತರರಲ್ಲಿ ಭಯವುಂಟಾಗದಂತೆ ಹಿಂದೀವಾದಿಗಳು ವರ್ತಿಸಿದ್ದಾರೆ — ಎನ್ನುವುದಕ್ಕೆ ಆಧಾರವಿಲ್ಲ.

ಒಂದು ಪಂಗಡಕ್ಕೆ ಹಿಂದೀವಿರೋಧಿಗಳು "ದೇಶದ್ರೋಹಿ" ಗಳು ಎನಿಸಿಕೊಂಡರೆ, ಇನ್ನೊಂದು ಗುಂಪಿಗೆ ಹಿಂದೀವಾದಿಗಳು "ಆಕ್ರಮಣಕರ್ತ" ರಾಗಿ ತೋರುತ್ತಿದ್ದಾರೆ. ಇಂಥ ಭಾವವೈಷಮ್ಯವು ಆಗಬಾರದಾಗಿತ್ತು; ಆಗಿದೆ." [13]

"ಹಿಂದಿಯ ಭಕ್ತರು ಆಕ್ರಮಣಕರ್ತರಲ್ಲ. ಹಿಂದಿಯ ವಿರೋಧಕರು ದೇಶದ್ರೋಹಿಗಳೂ ಅಲ್ಲ. ಭಕ್ತಿ–ದ್ರೋಹಗಳು ಯಾವುದೇ ಒಂದು ವರ್ಗದ ಏಕಾಯತ್ತತೆಗೆ ಸೇರಿದ ಒಡವೆಗಳೇನೂ ಅಲ್ಲ. ಗುಣದೋಷ ಎಲ್ಲರಲ್ಲಿಯೂ ಇದೆ. ಇಲ್ಲದಿರುವುದು ಸಹನಶೀಲತೆ; ಸಾವಧಾನತೆ. ಭಾರತದ ಜನಕೋಟಿ ಒಪ್ಪಿದರೆ ಹಿಂದಿಯು ಅಧಿಕೃತ ರಾಷ್ಟ್ರಸಂಪರ್ಕ ಭಾಷೆ." [14]

"ಪ್ರಜಾತಂತ್ರದ ಗೃಹ್ಯಸೂತ್ರಗಳಿಗೆ ಒಪ್ಪುವಂತೆ ವಿಚಾರ — ವಿಮರ್ಶೆ — ವಾದ — ಸಾಂತ್ವನಗಳ ಮೂಲಕ ಹಿಂದೀ ಪ್ರಶ್ನೆಯನ್ನು ಇತ್ಯರ್ಥಿಸಬೇಕು. "ಸ್ವಯಂವರಣ" ವಿಧಿಯಿಂದ ಹಿಂದಿಯು ಅಗ್ರಪಟ್ಟವನ್ನೇರಬೇಕು. "ರಾಕ್ಷಸ ವಿವಾಹ" ಪದ್ಧತಿಯಿಂದಲ್ಲ. ಈ ಬಗೆಯ ನಮ್ಮ ಸಂವಿಧಾನ ಸೂತ್ರಗಳಲ್ಲಿ ಬದಲಾವಣೆ ಆಗಬೇಕಾದರೆ, ಆಗಬೇಕು." [15]

ಭಾಷಾ ಹೇರಿಕೆಯಾಗದಿರುವುದು ಹೇಗೆ -- ಎಂಬುದನ್ನೇ ಶಂಕರಭಟ್ಟರು ಹೇಳುತ್ತಿದ್ದಾರೆ. ಆದರೆ ಅದು ಹೇಗೆ ಕಾರ್ಯಗತವಾದೀತು ಎಂದು ವಿವರಿಸುವುದಿಲ್ಲ. ಇವರ ಚಿಂತನೆಯಲ್ಲಿ, ಜನರ ಒಪ್ಪಿಗೆಯಿಂದ ಅವರನ್ನು ಒಲಿಸಿಕೊಂಡು ಹಿಂದಿಯು ರಾಷ್ಟ್ರಭಾಷೆಯಾಗಬೇಕು — ಎನ್ನುವ ವಿಚಾರ, ಮತ್ತು ಹಿಂದೀ ಭಕ್ತರು ಹಾಗೂ ಹಿಂದೀತರರ ವಿಷಯದಲ್ಲಿ ಸಮನ್ವಯ ಭಾವನೆ ಮೂಡಿಸಲು ಯತ್ನಿಸುವುದು ಗಮನಿಸಬೇಕಾದ ಅಂಶ.

ಕುವೆಂಪು ಅವರು, "ಪ್ರದೇಶ ಪ್ರದೇಶಗಳ ಮತ್ತು ಪ್ರದೇಶಕೇಂದ್ರಗಳ ವ್ಯವಹಾರದ ಸಲುವಾಗಿ ನಮ್ಮ ರಾಜ್ಯಾಂಗ ಒಂದು ಭಾಷೆಯನ್ನೊಪ್ಪಿಕೊಂಡಿದೆ. ಆದರೆ ಆ ಭಾಷೆ ನಮಗೆ ಬರಿಯ ಭಾಷಾದೃಷ್ಟಿಯಿಂದ ಮಾತ್ರವೆ ಬೇಕಾಗಬಹುದಾದುದು ವ್ಯಾವಹಾರಿಕ ಮಟ್ಟದಲ್ಲಿ. ಅದೂ ಎಲ್ಲರಿಗಲ್ಲ. ಅಂತಹ ವ್ಯವಹಾರಗಳಲ್ಲಿ ಭಾಗವಹಿಸುವವರಿಗೆ ಮಾತ್ರ." [16] ಎನ್ನುತ್ತಾರೆ. ಹಿಂದಿಯನ್ನು ಸಂಪರ್ಕ ಭಾಷೆಯನ್ನಾಗಿ ಒಪ್ಪಿಕೊಂಡರೂ, ಅದಕ್ಕಿಂತ ಹೆಚ್ಚಿನ ಮಹತ್ವವನ್ನು ಕುವೆಂಪು ಅವರು ಕೊಡುವುದಿಲ್ಲ.

ಮಾಸ್ತಿಯವರ ಪ್ರಕಾರ, ಜನರ ಭಾಷೆಯಲ್ಲಿಯೇ ಆಡಳಿತ ನಡೆಸಬೇಕು; ಒಂದು ರಾಜ್ಯದ ಬಹುಜನರ ಅಭಿಪ್ರಾಯ — ತಮ್ಮ ಭಾಷೆಯಲ್ಲೇ ಆಡಳಿತ ನಡೆಸಬೇಕು — ಎಂದು. ಹಿಂದಿಯು ಕೇಂದ್ರದ ಆಡಳಿತಕ್ಕಾಗಿ ಒಂದು ಭಾಷೆಯನ್ನು ಬಳಸಬೇಕು — ಆದರೆ ಅದು ಅಷ್ಟಕ್ಕಾಗಿ ಮಾತ್ರ ಸಾಕು; ಅದು ಒಂದು ಹೊರೆಯಾಗಬಾರದು. ಹಿಂದೀ ಹೇರಿಕೆ ಸರಿಯಲ್ಲ; ಆದರೆ ಅದಕ್ಕೆ ಬದಲು ಇಂಗ್ಲಿಷ್ ಇರಲಿ ಎನ್ನುವದೂ ಸರಿಯಲ್ಲ — ಎನ್ನುತ್ತಾರೆ.

'' ಹಿಂದೀಗೆ ಅಂಜಿ ಇಂಗ್ಲಿಷ್ ಇರಲಿ ಎಂದು ಹೇಳುತ್ತಿರುವ ನಮ್ಮ ಹಿರಿಯರು '' ಕೇಂದ್ರ ಸರಕಾರ ನಮ್ಮ ಹನ್ನೆರಡು ಭಾಷೆಗಳಲ್ಲಿಯೂ ಆಡಳಿತ ನಡೆಸಬೇಕು '' ಎಂಬ ಚಳುವಳಿ ನಡೆಸಿದರೆ ಒಳ್ಳೆಯದು ''[17] ಎನ್ನುತ್ತಾರೆ ಮಾಸ್ತಿಯವರು. ಕೇಂದ್ರ ಕಚೇರಿಯ ಭಾಷೆ ಇಂಗ್ಲಿಷ್ ಅಥವಾ ಹಿಂದಿ ಆಗುವುದಾದರೆ ಅದರ ವಿಷಯವನ್ನು ಅವರು ಹೀಗೆ ಹೇಳುತ್ತಾರೆ — '' ಕೇಂದ್ರದ ಕಚೇರಿಯಲ್ಲಿ ಒಂದು ಭಾಷೆ ಬಳಕೆಯಲ್ಲಿರಬೇಕು. ಸದ್ಯ ಅದು ಇಂಗ್ಲಿಷ್ ಆಗಿರಬಹುದು... ಹಿಂದೀ, ಕಚೇರಿಯಲ್ಲಿ ಬಳಸುವ ಭಾಷೆ ಅಷ್ಟೇ ಹೊರತು ಕಚೇರಿ ಇತರ ಭಾಷೆಯ ಜನರೊಂದಿಗೆ ವ್ಯವಹಾರ ನಡೆಸುವ ಭಾಷೆಯಾಗಬಾರದು ''[18]

ಕೇಂದ್ರದಲ್ಲಿ ಆಡಳಿತ ಭಾಷೆಯ ಕುರಿತು ಮಾಸ್ತಿಯವರು ಮೂರು ರೀತಿಯಲ್ಲಿ ಅಭಿಪ್ರಾಯಪಡುತ್ತಾರೆ: 1) ಕೇಂದ್ರದ ಆಡಳಿತ ಭಾಷೆ ಹಿಂದಿಯಾಗಲಿ 2) ಅದು ಇಂಗ್ಲಿಷ್ ಆಗಲಿ 3) ಕೇಂದ್ರದ ಆಡಳಿತ ಭಾರತದ ಹನ್ನೆರಡು ಭಾಷೆಗಳಲ್ಲೂ ಆಗಲಿ. ಈ ಮೂರು ಅಭಿಪ್ರಾಯಗಳು ಬೇರೆ ಬೇರೆ ಕಾಲದಲ್ಲಿ ವ್ಯಕ್ತಪಡಿಸಿದವುಗಳು.[19] ಆದರೆ ಈ ಬೇರೆ ಬೇರೆ ಅಭಿಪ್ರಾಯಗಳ ಹಿಂದೆ ದೃಢವಾಗಿದ್ದ ನಿಲುವ್, ಆಡಳಿತ ಜನಸಾಮಾನ್ಯರ ಭಾಷೆಯಲ್ಲಾಗಬೇಕು, ಅದು ಬಹುಜನರ ಬೇಡಿಕೆಯಂತೆ ಅವರ ಭಾಷೆಯಲ್ಲೇ ಆಗಬೇಕು — ಎಂಬುದು. ಆದರೆ ಬಹುಭಾಷಿಕ ಪ್ರದೇಶವಾದ ಭಾರತದೇಶದಲ್ಲಿ ಕೇಂದ್ರವು ಯಾವೆಲ್ಲ ರೀತಿಯಲ್ಲಿ ಆಡಳಿತ ನಡೆಸುವುದು ಸಾಧ್ಯ — ಎಂಬ ವಿಷಯದ ಹಿನ್ನೆಲೆಯಲ್ಲಿ ಮೂರು ಅಭಿಪ್ರಾಯಗಳು ಮೂಡಿಬಂದಿವೆ. ಇದರಲ್ಲಿ ಯಾವುದು ಅನುಕೂಲ ಎಂದು ಹೇಳುವುದಕ್ಕಿಂತ, ಆದು ಜನರಿಗೆ ಅವರ ಭಾಷೆಯಲ್ಲೇ ದೊರೆಯಬೇಕು; ಆಡಳಿತ ನಡೆಸುವ ಹತ್ತು ಜನರು, ಕೋಟಿ ಜನರು ಆಡುವ ಭಾಷೆಯನ್ನು ಕಲಿಯುವುದು ಸುಲಭ; ಕೋಟಿ ಜನ ಆಳುವ ಹತ್ತು ಜನರ ಭಾಷೆಯನ್ನೇ ಕಲಿಯಬೇಕೆಂದರೆ ಅದು ಸಾಧ್ಯವಿಲ್ಲ — ಎಂಬ ವಿಚಾರಕ್ಕೆ ಮಾಸ್ತಿಯವರು ಒತ್ತುಕೊಡುತ್ತಾರೆ.[20]

ಇದೇ ರೀತಿ ಆಲೋಚಿಸುವವರು ಇಂಗ್ಲಿಷ್ ಕುರಿತು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಹೆಚ್ಚುಕಡಿಮೆ ಸಮನ್ವಯ ಧೋರಣೆಯವೇ ಆಗಿವೆ. ಹಿಂದಿಯ ವಿಚಾರದಲ್ಲಿ ಹೇಗೋ ಹಾಗೆಯೇ ಇಂಗ್ಲಿಷ್ ಕೂಡಾ ಕನ್ನಡ ಭಾಷೆಯ ಬೆಳವಣಿಗೆಯನ್ನು ಹಾಗೂ ಅದರ ಅಸ್ತಿತ್ವವನ್ನು ಬಾಧಿಸುವಂತಿರಬಾರದು; ಆದರೆ ಶಿಕ್ಷಣ ಹಾಗೂ ಜ್ಞಾನಸಂಪಾದನೆಯಲ್ಲಿ ಹಿಂದಿಗಿಂತ ಇಂಗ್ಲೀಷಿನ ಉಪಯುಕ್ತತೆ ಹೆಚ್ಚಿರುವುದರಿಂದ ಆ ಕ್ಷೇತ್ರಗಳಲ್ಲಿ ಅದರ ಬಳಕೆ ಹಿಂದಿಗಿಂತ ಹೆಚ್ಚೇ ಇರಬೇಕು. ಅದೇ ರೀತಿ, ಹಿಂದಿ ದೇಶೀಯ ಭಾಷೆಯಾದುದರಿಂದ ಅದಕ್ಕಿರುವ ಸ್ಥಾನ ಇಂಗ್ಲಿಷಿಗಿರಬಾರದು; ಅದು ರಾಷ್ಟ್ರಭಾಷೆಯಾಗದು. ಉಪಯುಕ್ತತೆಯ ದೃಷ್ಟಿಯಿಂದ ಹಿಂದಿಗಿಂತ ಇಂಗ್ಲಿಷ್ ಭಾಷೆಯೇ ಹೆಚ್ಚು ಜನರಿಗೆ ಅಗತ್ಯ — ಎಂಬುದು ಇವರ ಒಟ್ಟಿನ ಅಭಿಪ್ರಾಯ.

4. <u>ಭಾಷಾಹೇರಿಕೆಗೆ ವಿರೋಧ:</u> ಸ್ವಾತಂತ್ರ್ಯ ದೊರಕಿದ ಬಳಿಕ ಕನ್ನಡ ಚಿಂತಕರಲ್ಲಿ ಉಂಟಾದ ಒಂದು ಮಹತ್ವದ ಬದಲಾವಣೆ — ದೇಶದ ಏಕತೆಯ ಹೆಸರಿನಲ್ಲಿ ನಡೆಯುವ ಭಾಷಾಹೇರಿಕೆಗೆ ವಿರೋಧ ಭಾವನೆಯನ್ನು ವ್ಯಕ್ತಪಡಿಸಿದುದು. ಈ ಬದಲಾವಣೆಯನ್ನು ಗುರುತಿಸುವಾಗ ಒಂದು ವಿಷಯ ಬಹಳ ಮುಖ್ಯ: ಸ್ವಾತಂತ್ರ್ಯಕ್ಕೆ ಮೊದಲು ಭಾಷಾಹೇರಿಕೆಯ ಬಗೆಗಿನ ವಿರೋಧ ಹಿಂದಿ ಮತ್ತು ಇಂಗ್ಲಿಷ್ — ಇವುಗಳ ಕುರಿತು ಬೇರೆಬೇರೆಯಾಗಿ ವ್ಯಕ್ತವಾಗಿತ್ತು. (ಇಂಗ್ಲಿಷ್ ವಿರೋಧದಲ್ಲಿ, ಸ್ವಾತಂತ್ರ್ಯ ಚಳವಳಿ ಹಾಗೂ ರಾಷ್ಟ್ರೀಯತೆಯ ಪ್ರಾಮುಖ್ಯತೆ ಮತ್ತು ಹಿಂದೀ ಹೇರಿಕೆಯ ಕುರಿತ ಎಚ್ಚರದಲ್ಲಿ ಪ್ರಾಂತಾಭಿಮಾನ, ಏಕೀಕರಣ ಚಳವಳಿ, ಕನ್ನಡಾಭಿಮಾನದ ಪ್ರಾಮುಖ್ಯತೆ — ಇವೆರಡು ನೆಲೆಗಳಿಂದ) ಸ್ವಾತಂತ್ರ್ಯಾನಂತರ, ಪ್ರಾಂತಾಭಿಮಾನ ಮತ್ತು ಪ್ರಾಂತಭಾಷೆಯ ಅಸ್ತಿತ್ವವೇ ಮುಖ್ಯವಾದುದರಿಂದ ಮತ್ತು ದೇಶದ ಏಕತೆಯ ಪ್ರಶ್ನೆ ಹಾಗೂ ರಾಷ್ಟ್ರೀಯತೆಯ ತೀವ್ರತೆ ಹಿಂದಕ್ಕೆ ಸರಿದುದರಿಂದ, ಹಿಂದಿ–ಇಂಗ್ಲಿಷ್ ಎರಡರ ದಬ್ಬಾಳಿಕೆಯ ಬಗೆಗಿನ ವಿರೋಧ ಜೊತೆಜೊತೆಯಲ್ಲಿಯೇ ವ್ಯಕ್ತಗೊಂಡಿತು. ಸ್ವಾತಂತ್ರ್ಯ ಪೂರ್ವದಲ್ಲಿ ಪರದೇಶ, ಪರಭಾಷೆಯ ಹಿಡಿತದಿಂದ ಭಾರತವನ್ನು ರಕ್ಷಿಸುವ ಅಗತ್ಯವಿತ್ತು; ಅದಕ್ಕಾಗಿ ದೇಶದ ಏಕತೆಗೇ ಪ್ರಾಮುಖ್ಯತೆ. ಸ್ವಾತಂತ್ರ್ಯಾನಂತರ ದೇಶದ ಏಕತೆಯ ಹೆಸರಿನಲ್ಲಿ ಕೇಂದ್ರದ ಹಿಡಿತದಿಂದ ಪ್ರಾಂತಭಾಷೆಗಳನ್ನು, ಅದರ ವೈಶಿಷ್ಟ್ಯ ಹಾಗೂ ಅಸ್ತಿತ್ವವನ್ನು ರಕ್ಷಿಸುವ ಅಗತ್ಯ ಹೆಚ್ಚಿತು. ಅದಕ್ಕಾಗಿ ರಾಜ್ಯದ, ರಾಜ್ಯಭಾಷೆಯ ವೈವಿಧ್ಯ, ವೈಶಿಷ್ಟ್ಯಕ್ಕೆ ಮತ್ತು ಅದರ ಬೆಳವಣಿಗೆಗೆ ಪ್ರಾಮುಖ್ಯತೆ. ಕನ್ನಡ ಚಿಂತಕರಲ್ಲಿ ಪ್ರಾದೇಶಿಕ ವೈಶಿಷ್ಟ್ಯಕ್ಕೆ

ಹಾನಿ ಮಾಡುವ ರೀತಿಯಲ್ಲದೇ ಭಾಷೆಯನ್ನು ವಿರೋಧಿಸುವ ಮನೋಭಾವವನ್ನು ಗಮನಿಸುವುದು ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತ ಚಿಂತನೆಯಲ್ಲಿ ಬಹಳ ಮುಖ್ಯವಾಗುತ್ತದೆ.

ಇಲ್ಲಿ ಮೂರು ಪ್ರಧಾನ ವಿಷಯಗಳು ಕನ್ನಡ ಚಿಂತಕರಲ್ಲಿ ಪ್ರಜ್ಞಾಪೂರ್ವಕವಾಗಿಯೂ, ಅಲ್ಲದೆಯೂ ಕಾಣಿಸಿಕೊಂಡಿದೆ: ಭಾಷಾಏಕತೆ, ಭಾಷಾ ವೈವಿಧ್ಯತೆ ಮತ್ತು ವೈವಿಧ್ಯದಲ್ಲಿ ಏಕತೆ — ಈ ಕಲ್ಪನೆಗಳು. ನಿಜವಾಗಿ, ಇವುಗಳ ಮೂಲದಲ್ಲಿರುವುದು ಎರಡೇ ವಿಚಾರಗಳು: ಏಕ ಮತ್ತು ಅನೇಕ. ಇವುಗಳ ನಡುವಿನ ಸಂಬಂಧವೇ ಮೂರನೆಯ ವಿಷಯವನ್ನು ರೂಪಿಸಿದೆ. ಭಾಷೆಯ ದೃಷ್ಟಿಯಿಂದ ಇವುಗಳು ಕೇವಲ ತಾತ್ವಿಕ ವಿಷಯಗಳಲ್ಲ; ದೈನಂದಿನ ಬದುಕಿನ ಅವಿಭಾಜ್ಯ ಅಂಗಗಳು. ಆದಕಾರಣ ಈ ಕುರಿತ ಚಿಂತನೆಗಳೆಲ್ಲ ಹೆಚ್ಚು ಕಡಿಮೆ ಸಾಮಾಜಿಕ ನೆಲೆಯಲ್ಲೇ ನಡೆದಿವೆ. ಇವುಗಳ ಹಿಂದಿನ ತಾತ್ವಿಕ ಗ್ರಹಿಕೆಗಳನ್ನು ಗುರುತಿಸುವುದು ಸಾಧ್ಯ.

ಅ) ಏಕತೆಯ ಕಲ್ಪನೆಗಳು ಬಹುಮಟ್ಟಿಗೂ 'ಅಖಿಲ ಭಾರತ' ವೆಂಬ ತಳಹದಿಯಲ್ಲಿ ನಡೆದವು. ಸ್ವಾತಂತ್ರ್ಯ ಲಭಿಸುವ ವೇಳೆಗೆ, ಅದರ ನಂತರ, 'ದೇಶಕ್ಕೊಂದು ಸಾಮಾನ್ಯ ಭಾಷೆ' 'ರಾಷ್ಟ್ರಭಾಷೆ' ಎಂಬುದರ ಸುತ್ತ ನಡೆದ ವಾದ, ವಿವಾದಗಳು ಆ ಕಲ್ಪನೆಯ ಇತಿಮಿತಿಯನ್ನು ವಾಸ್ತವಿಕವಾಗಿ ಮನದಟ್ಟು ಮಾಡಿಕೊಡದ ಕಾರಣ, ಆ ಇತಿಮಿತಿಗಳಿಂದಾದ ಏರುಪೇರುಗಳೇ ಅದರ ಆಳ—ಅಗಲದ ಕುರಿತ ಚಿಂತನೆಗೆ ದಾರಿಮಾಡಿಕೊಟ್ಟಿತು. ಆಕಾಶವಾಣಿ, ಟಿ.ವಿ., ರೈಲ್ವೇ ನಿಲ್ದಾಣಗಳು, ಕೇಂದ್ರ—ರಾಜ್ಯಗಳು ನಡೆಸುವ ಉದ್ಯೋಗಿಕ ಪರೀಕ್ಷೆಗಳು, ಆಡಳಿತ ಕಚೇರಿಗಳು, ಪತ್ರಿಕೆಗಳು — ಎಲ್ಲೆಡೆ 'ಅಖಿಲ ಭಾರತ' ಮಟ್ಟದಲ್ಲಿ ಚಲಾವಣೆಯಲ್ಲಿರುವ ಭಾಷೆಗಳೇ ವ್ಯಾಪಿಸಿ, ಕನ್ನಡ ಭಾಷೆ ಮರೆಯಾಗುತ್ತ ಬಂದಾಗ ಈ ಬಗೆಯ ಚಿಂತನೆಗಳು ಪ್ರಖರವಾಗತೊಡಗಿದವು.

ಕನ್ನಡ ಚಿಂತಕರು ಬಹುಮಟ್ಟಿಗೆ, ಭಾರತದ ಏಕತೆಗೆ ಒಂದು ಸಂಪರ್ಕ ಭಾಷೆಯು ಅತ್ಯಗತ್ಯವೆಂದು ಪ್ರತಿಪಾದಿಸದಿದ್ದರೂ, ಅಂಥ ಒಂದು ಭಾಷೆ ಇದ್ದರೆ ಒಳಿತು — ಎಂಬ ಮನೋಭಾವ ಅವರಲ್ಲಿ ಕಾಣುತ್ತದೆ.[21] ಇವೆರಡರ ನಡುವಿನ ಸೂಕ್ಷ್ಮ ವ್ಯತ್ಯಾಸ ಬಹಳ ಮುಖ್ಯ. ಮೊದಲನೆಯದರಲ್ಲಿ ಪ್ರಾದೇಶಿಕ ವೈವಿಧ್ಯ, ವೈಶಿಷ್ಟ್ಯಗಳ ಬಗೆಗೆ ಅಷ್ಟು

ಗಮನವಿಲ್ಲ; ಎರಡನೆಯದರಲ್ಲಿ ಅದಕ್ಕೇ ಹೆಚ್ಚಿನ ಗಮನ. ಈ ಬಗೆಯ ಚಿಂತನೆಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿದ್ದರೂ, ಒಟ್ಟು ದೃಷ್ಟಿಯಿಂದ ನೋಡುವಾಗ ಕನ್ನಡ ಚಿಂತಕರ ದೃಷ್ಟಿ ಎರಡನೇ ಬಗೆಯದು. ಇಲ್ಲಿ ಮುಖ್ಯವಾಗುವ ಒಂದು ವಿಚಾರ ವೆಂದರೆ, 'ರಾಷ್ಟ್ರೀಯ ಏಕತೆ' ಅಥವಾ 'ರಾಷ್ಟ್ರಭಾಷೆ' ಎಂಬ ಕಲ್ಪನೆ ಹೇಗೆ ದೇಶವನ್ನು ಒಂದುಗೂಡಿಸಬಲ್ಲುದೋ, ಹಾಗೆಯೇ ದೇಶವನ್ನು ಒಡೆಯುವ ಸಾಧ್ಯತೆಯೂ ಇದೆ- ಎಂಬುದು. ಉದಾಹರಣೆಗೆ, ಅಡಿಗರು ಹೇಳುತ್ತಾರೆ:

''ಆದಕಾರಣ ಹಿಂದಿಯನ್ನು ಐಚ್ಛಿಕವಾಗಿ, ಇನ್ನು ಯಾವುದಾದರೂ ಭಾರತೀಯ ಭಾಷೆಯನ್ನು ಕಲಿಯುವಂತೆಯೇ ನಮ್ಮ ಹುಡುಗರು ಕಲಿಯುವುದಕ್ಕೆ ಅಥವಾ ಕಲಿಯ ದಿರುವುದಕ್ಕೆ ಅವಕಾಶ ಮಾಡಿಕೊಡುವುದು ಕನ್ನಡದ ಅಭ್ಯುದಯಕ್ಕೆ ಮಾತ್ರವಲ್ಲ, ಈ ದೇಶ ಒಂದು ರಾಷ್ಟ್ರವಾಗಿ ಉಳಿಯುವುದಕ್ಕೂ ಕೈಕೊಳ್ಳಬೇಕಾದ ಅತ್ಯಂತ ಸಕಾರಣವಾದ ಕಾರ್ಯವಿಧಾನ. ಹಿಂದಿಯನ್ನು ನಮ್ಮ ಯಾವ ಭಾರತೀಯ ಭಾಷೆಗೂ ಪ್ರತಿಸ್ಪರ್ಧಿ ಯಾಗಿ ಮಾಡುವುದು ಎಂದರೆ ದೇಶದ ಐಕ್ಯವನ್ನೇ ಗಂಡಾಂತರಕ್ಕೆ ಒಡ್ಡಿದಂತೆ.''[22]

ಇಲ್ಲಿ ಸ್ವಾತಂತ್ರ್ಯನಂತರದ ಚಿಂತನೆಗಳನ್ನು ಸ್ವಾತಂತ್ರ್ಯ ಪೂರ್ವದ ಚಿಂತನೆ ಗಳೊಂದಿಗೆ ಹೋಲಿಸುವುದು ಉಪಯುಕ್ತವಾದೀತು. ಸ್ವಾತಂತ್ರ್ಯ ಪಡೆಯುವ ತೀವ್ರತೆ ಗಾಗಿ 'ಒಂದು ಭಾಷೆ' 'ಒಂದೇ ಜನ' ಎಂಬ ಹುಮ್ಮಸ್ಸು ಒಂದು ಚಳವಳಿಯ ಯಶಸ್ಸಿಗೆ ಕಾರಣವಾಯಿತು. ಹಿಂದೀ ಭಾಷೆ ಭಾರತದ ಏಕತೆಯ ಸಂಕೇತವೆನಿಸಿಕೊಂಡಿತ್ತು. ಇದೇ 'ಒಂದು' ಎನ್ನುವುದು ಮುಂದೆ ಉಂಟು ಮಾಡಿದ ಅನಾಹುತಗಳನ್ನು ಗಮನಿಸಿದರೆ, 'ಒಂದು' ಎನ್ನುವುದರ ಮಿತಿ ಅರ್ಥವಾಗಬಹುದು. ಸ್ವಾತಂತ್ರ್ಯಪೂರ್ವದ ಕೆಲವು ಚಿಂತಕರಲ್ಲಿ 'ಹಿಂದೀ ರಾಷ್ಟ್ರಭಾಷೆ' ಎಂಬ ಭಾವನೆಯೂ, ದೇಶದ ಏಕತೆಯನ್ನು ಬಲಪಡಿಸಲು ಅದು ಅತ್ಯಾವಶ್ಯಕವೆಂಬ ಅಭಿಪ್ರಾಯವೂ ಇತ್ತು. ಆದರೆ ಸ್ವಾತಂತ್ರ್ಯದ ಬಳಿಕ ಹಿಂದೀ ಭಾಷೆ ಯೊಂದೇ 'ರಾಷ್ಟ್ರಭಾಷೆ' ಯಲ್ಲವೆಂಬ ಧೋರಣೆಯನ್ನು, ಅದು ಏಕತೆಗೆ ಬದಲು ದೇಶದ ವಿಘಟನೆಗೆ ಕಾರಣವಾದೀತು ಎಂಬ ಎಚ್ಚರಿಕೆಯನ್ನು ಕನ್ನಡ ಚಿಂತಕರಲ್ಲಿ ನಾವು ಕಾಣಬಹುದು.[23] ಹಿಂದೀ ಒಂದೆಡೆ ದೇಶದ ಏಕತೆಗಾಗಿ, ಇನ್ನೊಂದೆಡೆ ವಿಘಟನೆಗಾಗಿ: ಈ ವೈರುಧ್ಯವನ್ನು ಹೆಚ್ಚಿನ ಕನ್ನಡ ಚಿಂತಕರು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ಆದರೆ ಕಾಲದ ಅವಶ್ಯಕತೆಯು ಹಿಂದಿಯಿಂದ ಉಂಟಾಗಬಹುದಾದ ತೊಂದರೆಗಿಂತ ಅದು ದೇಶದ

ಏಕತೆಗೆ ಅವಶ್ಯಕವೆಂಬುದನ್ನು ಪ್ರಧಾನವಾಗಿಸಿತು. ಸ್ವಾತಂತ್ರ್ಯಾನಂತರ ದೇಶದ ಏಕತೆಗಾಗಿ ಹಿಂದಿ ಅವಶ್ಯಕವೆನ್ನುವುದಕ್ಕಿಂತಲೂ ಅದರಿಂದ ಪ್ರಾದೇಶಿಕ ಭಾಷೆಗಳಿಗೆ ಉಂಟಾಗುವ ಹಾನಿಯೇ ಹೆಚ್ಚು — ಎಂಬ ಅಂಶ ಮುಖ್ಯವಾಯಿತು. ಇವುಗಳಲ್ಲಿ 'ಅಮುಖ್ಯ' ವಾದ ಅಂಶಗಳನ್ನು ನಿರ್ಲಕ್ಷಿಸುವಂತಿಲ್ಲವಾದರೂ, 'ಮುಖ್ಯ' ವಾದವುಗಳನ್ನು ಮಾತ್ರ ಅದರಿಂದ ಪ್ರತ್ಯೇಕಿಸಿ ನೋಡುವುದಾದರೆ, ಮೊದಲು ಹಿಂದಿಯಿಂದ ಉಂಟಾಗುವ ಗುಣವನ್ನು ಕಂಡರು; ಅನಂತರ, ಉಂಟಾದ ದೋಷವನ್ನು ಕಂಡರು — ಎನ್ನಬೇಕು. ಸ್ವಾತಂತ್ರ್ಯಪೂರ್ವದಲ್ಲಿ ಹಿಂದೀ ರಾಷ್ಟ್ರಭಾಷೆ, ಸಂಪರ್ಕಭಾಷೆಯಾಗಿ ಇರಲಿ — ಎಂದ ಕೆಲವು ಚಿಂತಕರು ಸ್ವಾತಂತ್ರ್ಯಾನಂತರ 'ಹಿಂದಿ ಒಂದು ರಾಷ್ಟ್ರಭಾಷೆಯಾಗಿ ಇರಲಿ, ಸಂಪರ್ಕಭಾಷೆಯಾಗಿ ಮಾತ್ರ ಇರಲಿ' ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಆ) ಸ್ವಾತಂತ್ರ್ಯದ ನಂತರ ಭಾರತದ ಭಾಷಾವೈವಿಧ್ಯತೆಯ ಕಡೆಗೆ ಗಮನಹರಿಸಿ, 'ಏಕದೇಶ, ಏಕಭಾಷೆ' ಎಂಬ ವಾದ ಸರಿಯಲ್ಲ; ಆದ್ದರಿಂದ ಪ್ರಾಂತಭಾಷೆಗಳು ಆಯಾ ಪ್ರಾಂತಗಳಲ್ಲಿ ಸ್ವಾಯತ್ತವಾಗಿರಬೇಕೆಂದೂ, ಭಾರತ ಫೆಡರಲ್ ಮಾದರಿಯ ಆಡಳಿತ ವ್ಯವಸ್ಥೆಯುಳ್ಳ, ವಿಕೇಂದ್ರೀಕರಣಕ್ಕೆ ಮಹತ್ವವುಳ್ಳ ರಾಷ್ಟ್ರವಾಗಬೇಕೆಂದೂ ಕನ್ನಡದ ಭಾಷಾಚಿಂತಕರಲ್ಲಿ ಹಲವರು ಅಭಿಪ್ರಾಯಪಡುತ್ತಾರೆ.[24] ಕೇಂದ್ರ–ರಾಜ್ಯ ಸಂಬಂಧ ಭಾಷಾಸಮಸ್ಯೆಗಳನ್ನು ಹುಟ್ಟು ಹಾಕುವಲ್ಲಿ ಹಾಗೂ ಅದನ್ನು ನಿಯಂತ್ರಿಸುವಲ್ಲಿ ಬಹಳ ಮುಖ್ಯವೆಂಬುದನ್ನು ಹೆಚ್ಚಿನವರು ಗುರುತಿಸುತ್ತಾರೆ. ಭಾಷಾರಾಜ್ಯಗಳ ಆತ್ಮಾಭಿಮಾನಕ್ಕೆ ಏಟು ಬೀಳದ ಹಾಗೆ ನೋಡಿಕೊಳ್ಳುತ್ತ ನಿಧಾನವಾಗಿ ರಾಷ್ಟ್ರಭಾವನೆಯನ್ನು ಮೂಡಿಸಿಕೊಳ್ಳಬೇಕೆಂದು ಅಡಿಗರು ಅಭಿಪ್ರಾಯಪಡುತ್ತಾರೆ.[25] ಕೇಂದ್ರ–ರಾಜ್ಯಗಳ ನಡುವಿನ ಸಂಬಂಧ ಇರಬೇಕಾದದ್ದು ಈ ರೀತಿ. ಪ್ರಾದೇಶಿಕ ಭಾಷೆಗಳ ಹಿತದೃಷ್ಟಿ ಕೇಂದ್ರದ್ದಾಗಿರಬೇಕು — ಆದ್ದರಿಂದ ನಾಡಿನ ಪ್ರಗತಿಯಲ್ಲಿ ಇವುಗಳೇ ಪ್ರಧಾನವೆಂಬ ಅಭಿಪ್ರಾಯ ಇಲ್ಲಿ ಬಹಳ ಮುಖ್ಯ.[26]

ಇ) ಪ್ರಾದೇಶಿಕ ವೈಶಿಷ್ಟ್ಯ, ಬಹುಭಾಷಿಕತೆ — ಇವಕ್ಕೆ ಸಂಪೂರ್ಣ ಸ್ವಾತಂತ್ರ್ಯ ಬೇಕೆಂಬುದು ನಿಜ. ಆದರೆ ನಾಡಿನ ಭದ್ರತೆಯ ದೃಷ್ಟಿಯಿಂದ ಹಲವು ಪ್ರಾಂತಗಳ ನಡುವೆ ಒಂದು ಕೇಂದ್ರದ ನಿಯಂತ್ರಣವಿರಬೇಕು; ಪ್ರಾಂತಗಳಲ್ಲಿ ಐಕ್ಯವಿರಬೇಕು. ಏಕತೆಯೊಂದೇ ಮುಖ್ಯವೆಂದು ಪ್ರಾದೇಶಿಕ ವೈವಿಧ್ಯತೆಗಳನ್ನು ನಾಶಮಾಡಲು ಯತ್ನಿಸುವುದಾಗಲಿ, ಏಕತೆಗಿಂತ ವೈವಿಧ್ಯತೆ ಮುಖ್ಯವೆಂದು ಸಿಡಿದು ನಿಲ್ಲುವುದಾಗಲಿ — ಅತಿರೇಕದ

ಕಾರಣಗಳು; ಆದ್ದರಿಂದ ಭಾಷಾವೈವಿಧ್ಯತೆಯನ್ನು ಒಪ್ಪಿಕೊಂಡು, ಅವಕ್ಕೆ ಸಂಪೂರ್ಣ ಸ್ವಾತಂತ್ರ್ಯ, ಪ್ರೋತ್ಸಾಹ ನೀಡುವ ರಾಷ್ಟ್ರೀಯ ಏಕತೆಯೊಂದೇ ಸರಿಯಾದ ಭಾಷಾನೀತಿಯಾಗಬೇಕು — ಎಂಬುದು ಹೆಚ್ಚಿನ ಕನ್ನಡ ಚಿಂತಕರ ನಿಲುವಾಗಿದೆ.[27] ಸ್ವಾತಂತ್ರ್ಯ ಪೂರ್ವದಲ್ಲಿ ಏಕತೆಗಾಗಿ ವೈವಿಧ್ಯವನ್ನು ಮರೆತದ್ದೂ, ಸ್ವಾತಂತ್ರ್ಯನಂತರ ಏಕತೆಗಾಗಿ ವೈವಿಧ್ಯವನ್ನು ನೆನಪಿಸಿದ್ದೂ ರಾಜಕೀಯ ಏರುಪೇರುಗಳ ನೇರ ಪರಿಣಾಮವಾಗಿದೆ. ಪರಕೀಯರ, ಪರಭಾಷೆಯ ದಬ್ಬಾಳಿಕೆಯಾಗುವಾಗ ನಮ್ಮ ದೇಶ ಒಂದಾಯಿತು; ಒಂದಾದ ದೇಶದಲ್ಲೇ ದಬ್ಬಾಳಿಕೆಯಾದಾಗ ಪ್ರಾದೇಶಿಕ ಘಟಕ ಒಂದಾಯಿತು — ಎಂಬುದು ಭಾಷಾಹೇರಿಕೆಯಿಂದಾಗುವ ವಿರುದ್ಧ ಪರಿಣಾಮವನ್ನು ತೋರಿಸುತ್ತದೆ. ಈ ಮೂರು ವಿಚಾರಗಳ ಹಿನ್ನೆಲೆಯಲ್ಲಿ ಕನ್ನಡ ಚಿಂತಕರು ಕಂಡುಕೊಂಡ ಸಂಗತಿಗಳನ್ನು ಹೀಗೆ ಪಟ್ಟಿ ಮಾಡಬಹುದು:

1) ಹಿಂದೀ ಒಂದೇ ರಾಷ್ಟ್ರಭಾಷೆಯಲ್ಲ; ಉಳಿದ ಭಾರತೀಯ ಭಾಷೆಗಳೂ ರಾಷ್ಟ್ರಭಾಷೆಗಳೇ.

2) ಹಿಂದೀ ಸಂಪರ್ಕಭಾಷೆಯಾಗಿ ಮಾತ್ರ ಇರಲಿ; ಅದು ಕೆಲವರಿಗೆ ಮಾತ್ರ ಸಾಕು. ಎಲ್ಲರಿಗೂ ಅದನ್ನು ಹೇರಲು ಹೊರಟರೆ ದೇಶ ಒಡೆದೀತು.

3) ಭಾರತ ಬಹುಭಾಷೆಗಳಿರುವ ದೇಶ; ಅವುಗಳಿಗೆ ಇರುವ ವೈಶಿಷ್ಟ್ಯವನ್ನು ಅಳಿಸದೇ ರಾಷ್ಟ್ರೀಯತೆ ಮೂಡಬೇಕು; ವಿವಿಧತೆಯಲ್ಲಿ ಏಕತೆಯಿರಬೇಕು.

4) ಪ್ರಾದೇಶಿಕ ಭಾಷೆಗಳೊಳಗೆ ಒಂದಕ್ಕೆ ರಾಷ್ಟ್ರಭಾಷೆ ಎಂಬ ಪಟ್ಟ ನೀಡುವ ಮೂಲಕ ಪಕ್ಷಪಾತ ಮಾಡುವುದು ತಪ್ಪು.

5) ಭಾಷಾನೀತಿ ಸಮರ್ಪಕವಾಗಿರಲು ಕೇಂದ್ರ—ರಾಜ್ಯಗಳ ನಡುವಿನ ಸಂಬಂಧ ಬಹಳ ಮುಖ್ಯವಾದದ್ದು.

6) ಶಿಕ್ಷಣ, ಆಡಳಿತ, ವ್ಯವಹಾರ, ಸಂವಹನ ಮಾಧ್ಯಮ — ಗಳಲ್ಲಿ ರಾಜ್ಯದ ಭಾಷೆಗೇ ಪ್ರಾಧಾನ್ಯತೆಯಿರಲಿ; ಇವುಗಳ ಮೂಲಕ ಪರೋಕ್ಷವಾಗಿ ಹಿಂದೀ ಹೇರಿಕೆ ನಡೆಸುವುದರಿಂದ ಪ್ರಾದೇಶಿಕ ಭಾಷೆ ಕ್ಷೀಣಿಸುತ್ತದೆ; ದೇಶದ ಅಭಿವೃದ್ಧಿಗೆ ಹಾನಿಯಾಗುತ್ತದೆ.

ಹಿಂದೀಹೇರಿಕೆಗೂ ಇಂಗ್ಲಿಷಿನ ಹಿಡಿತಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿ, 'ಇಂಗ್ಲಿಷಿಗಿಂತ ಹಿಂದಿಯೇ ಅಪಾಯಕಾರಿ' ಎಂದು ಹೆಚ್ಚಿನವರು ಅಭಿಪ್ರಾಯಪಡುತ್ತಾರೆ.[28] ಇದಕ್ಕೆ ಕಾರಣ ಇಂಗ್ಲಿಷ್ ಸರಕಾರದ ಬೆಂಬಲವಿಲ್ಲದೆ ಪ್ರಭುತ್ವ ನಡೆಸುತ್ತದೆ; ಹಿಂದಿ, ಭಾರತ

ಸರಕಾರದ ಬೆಂಬಲದಲ್ಲಿ ಪ್ರಭುತ್ವ ನಡೆಸುತ್ತದೆ – ಎನ್ನುತ್ತಾರೆ. ಇಂಗ್ಲಿಷಿನಿಂದ ಲಭಿಸುವ ವಿಜ್ಞಾನ ಗ್ರಂಥಗಳ ಅರಿವು, ಅಪಾರ ಸಾಹಿತ್ಯದ ಪರಿಚಯ, ಅಂತರರಾಷ್ಟ್ರೀಯ ಸಂಪರ್ಕ ಇತ್ಯಾದಿಗಳು ಹಿಂದಿಯಿಂದ ದೊರಕುವುದಿಲ್ಲ. ಆದ್ದರಿಂದ ಹಿಂದೀ ನಮಗೆ ಬೇಕಿಲ್ಲ; ಶಿಕ್ಷಣದಲ್ಲಿ ಇಂಗ್ಲಿಷ್, ಕನ್ನಡ – ಎರಡೇ ಸಾಕು; ಆಡಳಿತ ವ್ಯವಹಾರಕ್ಕೂ ಇಂಗ್ಲಿಷ್ ಭಾಷೆಯೇ ಸದ್ಯಕ್ಕೆ ಇರಲಿ – ಎಂದು ಕೆಲವರು ಸಕಾರಣವಾಗಿ ವಾದಿಸುತ್ತಾರೆ.[29] ಆದರೆ, ಹಿಂದೀ ಹೇರಿಕೆಯನ್ನು ಪ್ರತಿಭಟಿಸಿ ಅದರ ಜಾಗದಲ್ಲಿ ಇಂಗ್ಲಿಷನ್ನು ಸ್ಥಾಪಿಸಲು ಯತ್ನಿಸುವ ಮೂಲಕ ಪ್ರಾದೇಶಿಕ ಭಾಷೆಗಳ ಹಾನಿಯನ್ನು ತಂದುಕೊಳ್ಳುವುದನ್ನು ಹಲವು ಚಿಂತಕರು ವಿರೋಧಿಸುತ್ತಾರೆ. ಒಟ್ಟು ಅಭಿಪ್ರಾಯದಲ್ಲಿ,

1) ಏಕತೆ ಹಾಗೂ ವೈವಿಧ್ಯತೆ – ಎರಡೂ ಮುಖ್ಯ (ಹಿಂದಿ, ಕನ್ನಡ).

2) ಏಕತೆ ಅತಿರೇಕವಾದಾಗ ವಿಘಟನೆ (ಹಿಂದೀ ಹೇರಿಕೆ).

3) ಯಾವ ಭಾಷೆಯೂ ಕಡ್ಡಾಯವಾಗಬಾರದು.

– ಈ ಮೂರು ಅಂಶಗಳು ಭಾಷಾಹೇರಿಕೆಯ ಕುರಿತು ಕನ್ನಡ ಚಿಂತಕರಲ್ಲಿ ಬಂದಿವೆ.

## 2. ಇಂಗ್ಲಿಷ್ ಮಾಧ್ಯಮ ಶಾಲೆಗಳು ಮತ್ತು ಇಂಗ್ಲಿಷ್ ವ್ಯಾಮೋಹದ ಸಮಸ್ಯೆ.

ಇತ್ತೀಚಿನ ದಶಕಗಳಲ್ಲಿ ಎಲ್ಲೆಡೆ ಹಬ್ಬುತ್ತಿರುವ ಇಂಗ್ಲಿಷ್ ಮಾಧ್ಯಮ ಶಾಲೆಗಳು ಸೃಷ್ಟಿಸುತ್ತಿರುವ ಸಮಸ್ಯೆಗಳು ಇಂಗ್ಲಿಷ್-ಕನ್ನಡ ಸಂಬಂಧದ ವಿಚಾರವಾಗಿ ಬಹಳ ನಿರ್ಣಾಯಕ ಪಾತ್ರವನ್ನು ವಹಿಸುತ್ತಿವೆ. ಕನ್ನಡ ಚಿಂತಕರು ಈ ವಿಷಯವನ್ನು ಬಹಳ ಗಂಭೀರವಾಗಿಯೇ ಪರಿಗಣಿಸಿದ್ದರೂ, ಈ ಶಾಲೆಗಳು ಹೊಂದಿರುವ ಪ್ರಭಾವವನ್ನು ಅಡಗಿಸುವುದು ಸಾಧ್ಯವಾಗದೆ ಹೋಗಿದೆ. ಪ್ರಾಥಮಿಕ ಪೂರ್ವ ಹಂತದಿಂದಲೇ ಇಂಗ್ಲಿಷ್ ಮಾಧ್ಯಮದಲ್ಲಿ ಬೋಧನೆ ಮಾಡುವುದರಿಂದ ಉಂಟಾಗುವ ಪರಿಣಾಮಗಳನ್ನು ನಾಲ್ಕು ರೀತಿ ಗುರುತಿಸಬಹುದು.

1) ಮಕ್ಕಳ ಮನಸ್ಸಿನ ಬೌದ್ಧಿಕ ವಿಕಾಸದ ಮೇಲೆ ಉಂಟಾಗುವ ಕೆಟ್ಟ ಪರಿಣಾಮ; ಅವರ ಸೃಜನಶೀಲತೆ ಮುರುಟಿಹೋಗುತ್ತದೆ; 'ಬಾಯಿಪಾಠ' ಮಾಡುವ ಶಿಕ್ಷಣಕ್ರಮ ಬೆಳೆದು ಬರುತ್ತದೆ; ಶಿಕ್ಷಣದ ಗುಣಮಟ್ಟ ಕುಸಿಯುತ್ತದೆ.

2) ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣ ನೀಡುವುದರಿಂದ ನಮ್ಮ ಮಕ್ಕಳು ನಮ್ಮ ಸಂಸ್ಕೃತಿಗೆ ಪರಕೀಯರಾಗುತ್ತಾರೆ. ಇಂಗ್ಲಿಷ್ ವ್ಯಾಮೋಹದ ದಾಸ್ಯಕ್ಕೊಳ ಗಾಗುತ್ತಾರೆ.

3) ಇಂಗ್ಲಿಷ್ ಮಕ್ಕಳಲ್ಲಿ ಮೇಲರಿಮೆ, ಕನ್ನಡ ಮಕ್ಕಳಲ್ಲಿ ಕೀಳರಿಮೆ — ಹೀಗೆ ತಾರತಮ್ಯ ಭಾವವುಂಟಾಗುತ್ತದೆ. ವರ್ಗನಿರ್ಮಾಣ, ಶೋಷಣೆ ಸುಲಭವಾಗಿ ಮುಂದುವರಿಯುತ್ತದೆ.

4) ಶ್ರೀಮಂತರ ಆಶ್ರಯದಲ್ಲಿ ಇಂಗ್ಲಿಷ್ ಮಾಧ್ಯಮ ಬೆಳೆಯುತ್ತದೆ. ಕನ್ನಡ ಮಾಧ್ಯಮಕ್ಕೆ ಹೋಗುವ ಮಕ್ಕಳು ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಸೀಟು ಸಿಗದವರೇ ಆಗಿರುತ್ತಾರೆ; ಅಲ್ಲಿಗೆ ಬರುವ ಮಕ್ಕಳ ಸಂಖ್ಯೆಯೂ ತಗ್ಗುತ್ತದೆ. ಸರಕಾರವೂ ಕನ್ನಡ ಮಾಧ್ಯಮ ಶಾಲೆಗಳ ದುಸ್ಥಿತಿಯನ್ನು ಹೋಗಲಾಡಿಸುವುದಿಲ್ಲ. ಶಿಕ್ಷಣದ ಗುಣಮಟ್ಟವೂ ಅಲ್ಲಿ ಕುಸಿಯತೊಡಗಿದಾಗ ಹೆತ್ತವರೂ ಅಲ್ಲಿಗೆ ತಮ್ಮ ಮಕ್ಕಳನ್ನು ಕಳುಹಿಸುವುದಿಲ್ಲ. ಹೀಗಾದಾಗ ಇಂಗ್ಲಿಷ್ ಪುರಸ್ಕಾರ, ಕನ್ನಡ ತಿರಸ್ಕಾರ ವ್ಯಾಪಕವಾಗಿ ಉಂಟಾಗುತ್ತದೆ.

ಇಂಗ್ಲಿಷ್ ಮಾಧ್ಯಮ ಶಾಲೆಗಳು ಇಷ್ಟು ವ್ಯಾಪಕವಾದ ದುಷ್ಪರಿಣಾಮಗಳನ್ನು ಉಂಟುಮಾಡುವುದಾದರೂ, ಅವುಗಳ ಪ್ರಭಾವವನ್ನು ಕಡಿಮೆ ಮಾಡುವ ಯಾವ ಪ್ರಯತ್ನವೂ ಫಲಕಾರಿಯಾಗುವಂತೆ ಕಾಣುವುದಿಲ್ಲ. ಇದಕ್ಕೆ ಪ್ರಧಾನ ಕಾರಣಗಳಿವು:

1) ಇಂಗ್ಲಿಷ್ ಭಾಷೆಯನ್ನು ಕಲಿಯುವುದಕ್ಕೂ, ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುವುದಕ್ಕೂ ಇರುವ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳದೆ, ಇಂಗ್ಲಿಷ್ ಕಲಿಯುವುದು ಎಂದರೆ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುವುದು ಎಂಬ ತಪ್ಪುಕಲ್ಪನೆ ಜನರಲ್ಲಿ ಉಂಟಾದದ್ದು. ಹಾ.ಮಾ. ನಾಯಕರು ಹೇಳುತ್ತಾರೆ: "ಶಿಕ್ಷಣ ತಜ್ಞರೆನಿಸಿಕೊಂಡವರಿಗೂ ಅನೇಕ ಸಲ ಭಾಷೆಯನ್ನು ಕಲಿಸುವುದು, ಭಾಷೆಯ ಮೂಲಕ ಕಲಿಸುವುದು — ಇವುಗಳ ನಡುವಿನ ಅಂತರ ತಿಳಿದಿರುವುದಿಲ."[30]

2) ಆರ್ಥಿಕವಾಗಿ ಮುಂದೆ ಬರಲು ಸಾಧ್ಯವಾಗುವಂತಹ ವೈದ್ಯಕೀಯ, ಇಂಜಿನಿಯರಿಂಗ್ ವಿದ್ಯಾಭ್ಯಾಸ ಕೊಡಿಸಲು ಅನುಕೂಲವೆಂದು ಮಕ್ಕಳನ್ನು ಹೆತ್ತವರು ಇಂಗ್ಲಿಷ್ ಮಾಧ್ಯಮ ಶಾಲೆಗೆ ಸೇರಿಸುತ್ತಾರೆ. ಇಲ್ಲಿ ಮಕ್ಕಳ ಶಿಕ್ಷಣ ಹಾಗೂ ಅವರ ಮನಸ್ಸಿನ ವಿಕಾಸ ಅವರಿಗೆ ಮುಖ್ಯವಲ್ಲ; ಅವರ ಉದ್ಯೋಗವೂ, ಅದರಿಂದ ಬರುವ ಹಣವೂ ಮುಖ್ಯವಾಗಿದೆ.

3) ಕನ್ನಡ ಮಾಧ್ಯಮ ಶಾಲೆಗಳ ಅಸೌಕರ್ಯಗಳು, ಶೈಕ್ಷಣಿಕ ಮಟ್ಟ ಕುಸಿದಿರುವುದು ಹಾಗೂ ಸಾಮಾಜಿಕವಾಗಿ ಅದರ ಬಗ್ಗೆ ತಿರಸ್ಕಾರ ಬೆಳೆದಿರುವುದು. "ಬಡವರಲ್ಲಿ ಬಡವರು, ಇಂಗ್ಲಿಷ್ ಶಾಲೆಗಳಲ್ಲಿ ಪ್ರವೇಶ ಸಿಕ್ಕದೇ ಇದ್ದವರು ಕನ್ನಡ ಶಾಲೆಗಳಿಗೆ ಬರುತ್ತಾರೆ. ಇಂತಹ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ ತುಂಬಾ ಇಳಿಮುಖವಾಗಿದೆ. ಸಾಕಷ್ಟು ಕನ್ನಡ ಶಾಲೆಗಳು ಮುಚ್ಚುವ ಸ್ಥಿತಿಯಲ್ಲಿವೆ. ಕನ್ನಡ

ದೇಶದಲ್ಲಿಯೇ ಕನ್ನಡಕ್ಕೆ ಇಂತಹ ದುಃಸ್ಥಿತಿ ಬಂದಿರುವುದು ತುಂಬಾ ಶೋಚನೀಯ''[31] ಎನ್ನುತ್ತಾರೆ ಎಚ್. ನರಸಿಂಹಯ್ಯನವರು.

4) ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ನಡೆಸುವವರು ಅದನ್ನು ಒಂದು ವ್ಯಾಪಾರ ಸಂಸ್ಥೆಯನ್ನಾಗಿ ಮಾರ್ಪಡಿಸಿರುವುದು; ಕನ್ನಡ ಮಾಧ್ಯಮ ಶಿಕ್ಷಣ ಪರವಾದ ವಿಚಾರಗಳು ಇವುಗಳ ಪ್ರಗತಿಗೆ ಅಡ್ಡಿಯಾಗಿರುವುದರಿಂದ ಇಂಗ್ಲಿಷ್ ಮಾಧ್ಯಮವನ್ನು ಸಮರ್ಥಿಸುವ ಅನೇಕ ವಾದಗಳನ್ನು ಹುಟ್ಟುಹಾಕಿ, ಅಲ್ಪಸಂಖ್ಯಾಕ ಭಾಷೆ — ಎನ್ನುವ ನೆಪವನ್ನೊಡ್ಡಿ ಸರಕಾರದ ಅನುಕಂಪಕ್ಕೊಳಗಾಗಿ ಪರವಾನಗಿ ಪಡೆಯುವುದು; ಸರಕಾರದ ಅಸ್ತಿತ್ವವನ್ನೇ ಅಲುಗಾಡಿಸುವಂತೆ ಭಾಷಾ ಅಲ್ಪಸಂಖ್ಯಾತರು ಮತ್ತು ಇಂಗ್ಲಿಷ್ ವ್ಯಾಮೋಹಿಗಳು ಗುಂಪುಗಾರಿಕೆ ನಡೆಸುವುದು.

5) ಕೇಂದ್ರ ಸರಕಾರದ ನಿಯಂತ್ರಣದಲ್ಲಿರುವ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರ ಮಕ್ಕಳ ಶಿಕ್ಷಣಕ್ಕಾಗಿ ಇರುವ ಕೇಂದ್ರೀಯ ವಿದ್ಯಾಲಯಗಳನ್ನು ಅನುಕರಿಸಿ ಇಂಗ್ಲಿಷ್ ಮಾಧ್ಯಮ ಶಾಲೆಗಳು ಬೆಳೆಯುತ್ತಿವೆ. ಕೇಂದ್ರೀಯ ವಿದ್ಯಾಲಯಗಳಿಗೂ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ನೀಡುವ ಸಹಕಾರೀ ಶಾಲೆಗಳಿಗೂ ಇರುವ ಅಂತರವೇ ಇದಕ್ಕೆ ಕಾರಣ.

6) ವಸಾಹತುಶಾಹಿ ಮನೋಭಾವದಿಂದ ಜನರಲ್ಲಿ, ಮುಖ್ಯವಾಗಿ ವಿದ್ಯಾವಂತರಲ್ಲಿ — ಉಂಟಾಗಿರುವ ಇಂಗ್ಲಿಷ್ ವ್ಯಾಮೋಹ, ಕನ್ನಡದ ಬಗೆಗಿನ ಕೀಳರಿಮೆ, ಇಂಗ್ಲಿಷ್ ಮಾಧ್ಯಮದಲ್ಲಿ ತಮ್ಮ ಮಕ್ಕಳನ್ನು ಕಲಿಸುವುದರಿಂದ ಹೆತ್ತವರ ಅಂತಸ್ತು ನಿರ್ಣಯವಾಗುವುದು — ಇಂತಹ ಮಾನಸಿಕ ಭಾವನೆಗಳೂ ಇಲ್ಲಿ ಮುಖ್ಯವಾಗಿವೆ.

ಇಂಗ್ಲಿಷ್ ಮಾಧ್ಯಮ ಶಾಲೆಗಳು ವ್ಯಾಪಕವಾಗುವುದರಲ್ಲಿ ಒಂದು ವಿಷಯವನ್ನು ಗಮನಿಸಬಹುದು. ಉಳಿದ ವಿಷಯಗಳಿಗಿಂತ ಅದು ಭಿನ್ನವಾಗುವಲ್ಲಿ ಕೆಲವು ತೋರಿಕೆಯ ಅಂಶಗಳು — ಸುಸಜ್ಜಿತ ಪೀಠೋಪಕರಣಗಳು, ಸಮವಸ್ತ್ರ ಇತ್ಯಾದಿ — ಮುಖ್ಯ ಪಾತ್ರವನ್ನು ವಹಿಸುತ್ತವೆ. ಕಲಿಕೆಯ, ಶಿಕ್ಷಣ ವಿಧಾನದ ದೋಷಗಳಿಗಿಂತ ಈ ಅನುಕೂಲತೆಗಳೇ ಮುಖ್ಯವಾಗುತ್ತದೆ— ಕಾರಣ, ಮಕ್ಕಳ ಹೆತ್ತವರ ಗಮನವನ್ನು ಮೊದಲು ಸೆಳೆಯುವುದು ಈ ಭೌತಿಕ ಅಂಶಗಳೇ ಆಗಿವೆ. ಇದಕ್ಕಿಂತ ಮುಖ್ಯವಾಗಿ, ಮಕ್ಕಳಲ್ಲಿ ಸಾಮಾಜಿಕ ಪ್ರಜ್ಞೆ ಮೂಡಿಸುವುದಕ್ಕೆ ತಡೆಯಾಗುವ 'ಪ್ರತ್ಯೇಕಗೊಳ್ಳುವ' (ಕನ್ನಡ ಮಾಧ್ಯಮ ಶಾಲೆಯ ವಿದ್ಯಾರ್ಥಿಗಳಿಂದ, ಕನ್ನಡ ಮಾತಾಡುವವರಿಂದ) ಮನೋಭಾವ ಬೆಳೆಯುವುದನ್ನು ಹೆತ್ತವರು ಗಮನಿಸುವುದಿಲ್ಲ; ಇದರಿಂದಾಗಿ ಇಂಗ್ಲಿಷ್ ಮಾಧ್ಯಮವನ್ನು, ಇಂಗ್ಲಿಷ್ ಸಂಸ್ಕೃತಿಯನ್ನು ಶ್ರೇಷ್ಠವೆಂದು ತಿಳಿಯುವ ಒಂದು ವರ್ಗವೇ ನಿರ್ಮಾಣವಾಗುತ್ತದೆ.

ಇಂಗ್ಲಿಷ್ ಮಾಧ್ಯಮ ಶಾಲೆಗಳು ಸೃಷ್ಟಿಸುವ ಸಮಸ್ಯೆಗಳನ್ನು ಬಗೆಹರಿಸಲು ಇರುವ ಒಂದೇ ದಾರಿ — ಕಡ್ಡಾಯವಾಗಿ ಮಾತೃಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡುವುದು. ಹೀಗೆ ಮಾಡಲು ಈಗ ಇರುವ ತೊಂದರೆಗಳನ್ನು ಗಮನಿಸಿ, ಅದಕ್ಕೆ ಪರಿಹಾರಮಾರ್ಗಗಳನ್ನು ಕನ್ನಡ ಚಿಂತಕರು ಮುಖ್ಯವಾಗಿ ಮೂರು ಬಗೆಯಲ್ಲಿ ಸೂಚಿಸು ತ್ತಾರೆ:

1) ಸರಕಾರದ ಕಟ್ಟುನಿಟ್ಟಾದ ಕ್ರಮ.

2) ಹೆತ್ತವರು ತಮ್ಮ ಮನೋಭಾವವನ್ನು ಪರಿವರ್ತಿಸಿಕೊಳ್ಳುವುದು.

3) ಕನ್ನಡ ಶಾಲೆಗಳನ್ನು ಉತ್ತಮಗೊಳಿಸುವುದು.

ಇಂಗ್ಲಿಷನ್ನು ಮಾತೃಭಾಷೆಯಾಗಿ ಇರುವವರು ಇದ್ದಾರೆಂದೂ, ಅದು ಕರ್ನಾಟಕ ದಲ್ಲಿ ಅಲ್ಪಸಂಖ್ಯಾತ ಭಾಷೆಯೆಂದೂ ಹೇಳಿಕೊಂಡು ಅದಕ್ಕೆ ಸಂವಿಧಾನದ ರಕ್ಷಣೆ ನೀಡಲು ಒತ್ತಾಯಿಸುವುದನ್ನು ತಡೆಗಟ್ಟಬೇಕೆಂದು ಹೆಚ್ಚಿನ ಕನ್ನಡ ಚಿಂತಕರು ಅಭಿಪ್ರಾಯಪಡುತ್ತಾರೆ.[32] ಭಾರತದಲ್ಲಿ ಇಂಗ್ಲಿಷ್ ಮಾತೃಭಾಷೆಯಾಗಿರುವವರು ಆಂಗ್ಲೋ — ಇಂಡಿಯನ್ನರು ಮಾತ್ರ. ಅವರ ಸಂಖ್ಯೆ ಕಡಿಮೆ. ಅವರಿಗೆ ಹೊರತಾದವರು ಮಕ್ಕಳಿಗೆ ಇಂಗ್ಲಿಷ್ ಕಲಿಸುವುದರಿಂದ ಅವರ ಮಾತೃಭಾಷೆ ಇಂಗ್ಲಿಷ್ ಆಗಲಾರದು.[33] ಆದ್ದರಿಂದ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಪರವಾನಿಗೆ ನೀಡುವುದನ್ನು ಕಡ್ಡಾಯವಾಗಿ ನಿಷೇಧಿಸಬೇಕು ಎನ್ನುತ್ತಾರೆ.[34]

ಇಂಗ್ಲಿಷ್ ಮಾಧ್ಯಮ ಶಾಲೆಗಳ ಪ್ರಭಾವ ಕಡಿಮೆಯಾಗುವುದರಲ್ಲಿ ಹೆತ್ತವರ ಪಾತ್ರ ವನ್ನು ಕನ್ನಡ ಚಿಂತಕರು ಮುಖ್ಯವಾಗಿ ಗಮನಿಸುತ್ತಾರೆ. ಮಕ್ಕಳ ಶಿಕ್ಷಣದ ವಿಷಯದಲ್ಲಿ ಪೈಪೋಟಿ ನಡೆಸುವುದು, ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಡೊನೇಷನ್ ನೀಡಿ ಪ್ರವೇಶ ದೊರಕಿಸುವುದು — ಇವುಗಳ ನಡುವೆ ಮಕ್ಕಳ ಬೆಳವಣಿಗೆಗೆ ಉಂಟಾಗುವ ಹಾನಿ ಮರೆಯಾಗಿ ಬಿಡುತ್ತದೆ. ಆದಕಾರಣ ತಂದೆ, ತಾಯಂದಿರು ತಮ್ಮ ಮನೋಭಾವವನ್ನು ಆರೋಗ್ಯ ಕರವಾದ ರೀತಿಯಲ್ಲಿ ಪರಿವರ್ತಿಸಿಕೊಳ್ಳುವುದು ಅವಶ್ಯಕವಾಗಿದೆ — ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ, ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ನೀಡಬೇಕು — ಎನ್ನುವ ದನ್ನು ವಿರೋಧಿಸುವವರು 'ಭಾಷಾ ಮಾಧ್ಯಮದ ಆಯ್ಕೆಯನ್ನು ಮಕ್ಕಳ ಹೆತ್ತವರಿಗೆ ಬಿಡಿ' ಎನ್ನುವಾಗ ಅವರು, ''ಮಕ್ಕಳ ಶಿಕ್ಷಣವನ್ನು ನಿರ್ಧರಿಸಬೇಕಾದದ್ದು ಹೆತ್ತವರಲ್ಲ, ಶಾಲೆಗಳೂ ಅಲ್ಲ; ಶಿಕ್ಷಣ ತಜ್ಞರು'' ಎಂದು ಕೂಡ ಪ್ರತಿಪಾದಿಸುತ್ತಾರೆ.[35] ಇಲ್ಲಿ

ಉಂಟಾಗುವ ವಿರುದ್ಧ ಅಭಿಪ್ರಾಯಗಳಿಗೆ ಕಾರಣವಿಷ್ಟೇ : ಮಕ್ಕಳ ಹಿತಚಿಂತನೆ ಮಾಡುವವರು, ಯೋಗ್ಯ ರೀತಿಯ ಶಿಕ್ಷಣ ಯಾವುದು ಎಂದು ನಿರ್ಧರಿಸಬೇಕು; ಮಾತೃಭಾಷಾ ಶಿಕ್ಷಣವೇ ಮಕ್ಕಳ ಬೆಳವಣಿಗೆಗೆ ಅತ್ಯಂತ ಸೂಕ್ತ — ಎಂದು ಸಿದ್ಧವಾಗಿರುವಾಗ ಹೆತ್ತವರು ಅದನ್ನೇ ಮಕ್ಕಳಿಗೆ ನೀಡಬೇಕು — ಎಂಬುದು ಸಾಮಾನ್ಯ ಚಿಂತನೆ. ಆದರೆ ಹೆತ್ತವರ ಆಯ್ಕೆಯಲ್ಲಿರುವ ತಪ್ಪುಕಲ್ಪನೆ, ತಪ್ಪುಮನೋಭಾವಗಳಿಂದ ಮಕ್ಕಳ ಭವಿಷ್ಯಕ್ಕೆ ಹಾನಿಯಾಗುವ ಸಂದರ್ಭದಲ್ಲಿ ಭಾಷಾಮಾಧ್ಯಮದ ಆಯ್ಕೆಯನ್ನು ಶಿಕ್ಷಣ ತಜ್ಞರಿಗೆ ವಹಿಸಬೇಕು — ಎನ್ನುವ ಚಿಂತನೆ ಮೂಡಿಬಂತು. ಯಾವುದು ಒಳ್ಳೆಯ ಶಿಕ್ಷಣ — ಎಂಬುದರ ಕುರಿತು ವಿರುದ್ಧ ಅಭಿಪ್ರಾಯಗಳು ಹಬ್ಬಿರುವುದೇ ಈ ಬಗೆಯ ವಿವಾದಕ್ಕೆ ಕಾರಣವಾಗಿದೆ. ಒಂದು ಕಡೆ ಶಿಕ್ಷಣ ತಜ್ಞರ ನಿಸ್ಸಂದೇಹವಾದ ಅಭಿಪ್ರಾಯ; ಇನ್ನೊಂದೆಡೆ ತಪ್ಪು ಗ್ರಹಿಕೆಯಿಂದ ಮಾಡಿದ, ಅನ್ಯ ಹಿತಾಸಕ್ತಿಗಳ ಅಗತ್ಯಕ್ಕಾಗಿ ರೂಪಿಸಲಾದ ಅಭಿಪ್ರಾಯ. ಇವೆರಡರ ನಡುವೆ ಸರಕಾರವೂ, ಜನತೆಯೂ ಯೋಗ್ಯವಾದ ಶಿಕ್ಷಣ ಕ್ರಮವನ್ನು ರೂಢಿಗೆ ತರಬೇಕಾದ ಅವಶ್ಯಕತೆಯಿದೆ.

ಕನ್ನಡ ಶಾಲೆಗಳನ್ನು ಉತ್ತಮಗೊಳಿಸುವ ಮೂಲಕ, ಕನಿಷ್ಠಪಕ್ಷ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಸರಿಸಮವಾಗಿ ಸಾಧನ — ಸಲಕರಣೆಗಳಿಂದ ಸುಸಜ್ಜಿತವಾಗಿರುವಂತೆ ಮಾಡುವ ಮೂಲಕ ಇಂಗ್ಲಿಷ್ ಮಾಧ್ಯಮ ಶಾಲೆಗಳ ಪ್ರಸಾರವನ್ನು ತಡೆಯಬಹುದು — ಎನ್ನುವ ಅಭಿಪ್ರಾಯ, ಅದರ ಕಾರ್ಯಬಾಹುಳ್ಯವನ್ನು ಕುರಿತು ಹೆಚ್ಚು ಗಮನಿಸುವುದಿಲ್ಲ. ಮುಖ್ಯವಾಗಿ, ಹಳ್ಳಿಗಳಲ್ಲಿರುವ ಸರಕಾರೀ ಶಾಲೆಗಳಲ್ಲಿ ಮತ್ತು ಅಧ್ಯಾಪಕರಿಲ್ಲದ ಕನ್ನಡ ಶಾಲೆಗಳಲ್ಲಿ ಅಧ್ಯಾಪಕರುಗಳ ನೇಮಕ, ಅವರಿಗೆ ಸಮರ್ಪಕವಾದ ತರಬೇತಿ, ಪ್ರತಿಯೊಂದು ಶಾಲೆಗೂ ಉತ್ತಮ ಸಲಕರಣೆಗಳ ಸರಬರಾಜು, ಪ್ರಾಥಮಿಕ ಶಾಲಾಶಿಕ್ಷಕರ ವೇತನದಲ್ಲಿ ಸುಧಾರಣೆ — ಹೀಗೆ ಈ ಬಗೆಯ ಕಾರ್ಯಗಳು ಅತ್ಯಂತ ವ್ಯಾಪಕವಾಗಿವೆ. ಖಾಸಗಿ ಸಂಸ್ಥೆಗಳು ಇಂಗ್ಲಿಷ್ ಮಾಧ್ಯಮ ಶಿಕ್ಷಣಕ್ಕಾಗಿ ಹಣ ವ್ಯಯಿಸುವುದನ್ನು ತಪ್ಪಿಸಿ, ಕನ್ನಡ ಮಾಧ್ಯಮ ಶಾಲೆಗಳನ್ನು ಅದೇ ರೀತಿ ವ್ಯವಸ್ಥಿತವಾಗಿ ನಡೆಸಬಾರದೇಕೆ — ಎಂಬ ಅಭಿಪ್ರಾಯವೂ ಇದೆ.

ಇತ್ತೀಚೆಗೆ ಕರ್ನಾಟಕ ಸರಕಾರ ಕನ್ನಡದಲ್ಲೇ ಪ್ರಾಥಮಿಕ ಶಿಕ್ಷಣವಾಗಬೇಕೆಂದು ಹೊರಡಿಸಿದ ಆಜ್ಞೆಯ ಹಿನ್ನೆಲೆಯಲ್ಲಿ ಸಾರ್ವಜನಿಕ ಕ್ಷೇತ್ರಗಳಲ್ಲಿ, ಪತ್ರಿಕೆಗಳಲ್ಲಿ ಮೂಡಿಬಂದ ಅಭಿಪ್ರಾಯಗಳು ಮುಖ್ಯವಾಗಿ ಮೂರು ರೀತಿಯ ನಿಲುವುಗಳನ್ನು ಸೂಚಿಸುತ್ತವೆ:

1) ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣ ಬೇಡ, ಅದು ಮಾತೃಭಾಷೆಯಲ್ಲೇ ಇರಲಿ.[36]

2) ಇಂಗ್ಲಿಷ್ ಮಾಧ್ಯಮವೇ ಇರಲಿ. ಕನ್ನಡ ಕಲಿಯುವುದು ಈಗೀಗ ನಿರುಪಯುಕ್ತವಾಗಿದೆ.[37]

3) ಕನ್ನಡಕ್ಕೆ ಹಾನಿಯಾಗದಂತೆ ಇಂಗ್ಲಿಷ್ ಮಾಧ್ಯಮವಿರಲಿ.

ಇಲ್ಲಿ ಮೊದಲನೇ ಅಭಿಪ್ರಾಯಕ್ಕೆ ಶಿಕ್ಷಣ ತಜ್ಞರ, ಕನ್ನಡ ಚಿಂತಕರ ಮತ್ತು ಕನ್ನಡ ಚಳವಳಿಗಾರರ ಬೆಂಬಲವಿದೆ. ಇಂಗ್ಲಿಷನ್ನು ಕಲಿಸುವುದಕ್ಕೂ, ಅದನ್ನು ಕಲಿಕೆಯ ಮಾಧ್ಯಮವಾಗಿ ಮಾಡುವುದಕ್ಕೂ ಇರುವ ವ್ಯತ್ಯಾಸವನ್ನು ಇವರಲ್ಲಿ ಹೆಚ್ಚಿನವರು ಹೇಳುತ್ತಾರೆ. ಅದೇ ರೀತಿ ಇಂಗ್ಲಿಷ್ ಶಿಕ್ಷಣದಿಂದ ನಮ್ಮ ಸಂಸ್ಕೃತಿಗೆ ಉಂಟಾಗುವ ಹಾನಿಯನ್ನೂ, ಅದರಿಂದ ಉಂಟಾಗುವ ಶೈಕ್ಷಣಿಕ ದುಷ್ಪರಿಣಾಮಗಳನ್ನೂ ಅವರು ಒತ್ತಿ ಹೇಳುತ್ತಾರೆ.

ಎರಡನೇ ಅಭಿಪ್ರಾಯವನ್ನು ವ್ಯಕ್ತಪಡಿಸುವವರಲ್ಲಿ ಹೆಚ್ಚಿನವರು ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳ ಪ್ರಾಂಶುಪಾಲರು ಹಾಗೂ ಇಂಗ್ಲಿಷ್ ಮಾಧ್ಯಮದಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವ ಹೆತ್ತವರು. ಇವರ ಪ್ರಕಾರ, ಇಂಗ್ಲಿಷ್ ಬೋಧನೆಯ ಮಾಧ್ಯಮವಾಗಿರುವುದರಿಂದ ಶಿಕ್ಷಣದ ಗುಣಮಟ್ಟ ಉತ್ತಮಗೊಳ್ಳುತ್ತದೆ; ವೈಜ್ಞಾನಿಕ, ವೈದ್ಯಕೀಯ, ಇಂಜಿನಿಯರಿಂಗ್ ಶಿಕ್ಷಣಕ್ಕೂ, ರಾಷ್ಟ್ರೀಯ — ಅಂತರರಾಷ್ಟ್ರೀಯ ವ್ಯವಹಾರಗಳಿಗೂ ಅದು ಉಪಯುಕ್ತವಾಗುತ್ತದೆ. ಈಗೀಗ ಕನ್ನಡ ನಿರುಪಯುಕ್ತವಾಗಿದೆ ಎಂಬ ಮಾತು ಔದ್ಯೋಗಿಕ ಲಾಭದ ದೃಷ್ಟಿಯಿಂದಲೇ ಹೆಚ್ಚಾಗಿ ಪ್ರಭಾವಿತವಾಗಿದೆ. ಆದರೆ ಇಂಗ್ಲಿಷಿನಿಂದಾಗುವ ಹಾನಿಯನ್ನು ಇವರು ಅಷ್ಟಾಗಿ ಗಮನಿಸುವುದಿಲ್ಲ. ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು — ಎನ್ನುವ ವಾದದಲ್ಲಿ ಹುರುಳಿಲ್ಲ — ಎಂದು ಸುಲಭವಾಗಿ ತೀರ್ಮಾನಿಸಿಬಿಡುತ್ತಾರೆ.

ಮೂರನೇ ಅಭಿಪ್ರಾಯ ಪ್ರಾಯೋಗಿಕವಾಗಿ ಅಸಾಧ್ಯವೆಂದೇ ಹೇಳಬೇಕು. ಇಂಗ್ಲಿಷ್ ಭಾಷೆ ಶಿಕ್ಷಣ ಮಾಧ್ಯಮವಾದೊಡನೆ ಕನ್ನಡಕ್ಕೆ ಬಾಧೆ ತಟ್ಟಿಯೇ ತಟ್ಟುತ್ತದೆ. ಇಂಗ್ಲಿಷ್ ರೀತಿಯಲ್ಲಿಯೇ ಮಕ್ಕಳ ಚಿಂತನಾಕ್ರಮ ರೂಪಿತವಾಗುತ್ತದೆ. ಆದ್ದರಿಂದ ಈ ಅಭಿಪ್ರಾಯದಲ್ಲಿ ಯಾವುದೇ ಗಟ್ಟಿತನವಿಲ್ಲವೆಂದು ಹೇಳಬಹುದು. ಉಳಿದ ಎರಡು ಅಭಿಪ್ರಾಯಗಳಲ್ಲಿ ಮೊದಲ ಅಭಿಪ್ರಾಯಕ್ಕೆ ತಾತ್ವಿಕ ಹಾಗೂ ಪ್ರಾಯೋಗಿಕ ನೆಲೆಗಟ್ಟು

ಭದ್ರವಾಗಿದೆ. ಶೈಕ್ಷಣಿಕ, ಸಾಮಾಜಿಕ ಅಭಿವೃದ್ಧಿಗೆ ಮಾತೃಭಾಷೆಯೇ ಸೂಕ್ತ ಎನ್ನುವುದಕ್ಕೆ ವೈಜ್ಞಾನಿಕ ಆಧಾರವಿದೆ. ಎರಡನೇ ಅಭಿಪ್ರಾಯ ಸಂಪೂರ್ಣವಾಗಿ ರಾಜಕೀಯ ಮತ್ತು ತಪ್ಪುಕಲ್ಪನೆಗಳಿಂದ ರೂಪುಗೊಂಡಿರುವುದರಿಂದ, ತಮ್ಮ ಅಗತ್ಯಗಳಿಗಾಗಿ ವಾದವನ್ನು ನಿರ್ಮಿಸಿಕೊಂಡಿರುವುದು ಸ್ಪಷ್ಟವೇ ಆಗಿದೆ. ಒಟ್ಟಿನಲ್ಲಿ, ಭಾಷಾ ಮಾಧ್ಯಮದ ವಿಷಯದಲ್ಲಿ 'ಮಾತೃಭಾಷೆಯ ಶಿಕ್ಷಣವೇ ಅತ್ಯುತ್ತಮ' – ಎಂಬ ಸತ್ಯವನ್ನು ಜನರಲ್ಲಿ ಸಾರ್ವತ್ರಿಕವಾಗಿ ಮನವರಿಕೆ ಮಾಡಿಕೊಡುವುದು ಅತ್ಯಂತ ಅವಸ್ಯಕವಾಗಿದೆ.

## 3. ಭಾಷಾ ಅಲ್ಪಸಂಖ್ಯಾತರು, ವಲಸಿಗರು ಮತ್ತು ಇಂಗ್ಲಿಷ್

ರಾಜಧಾನಿ ನಗರ ಬೆಂಗಳೂರಿನಲ್ಲೂ, ರಾಜ್ಯದ ಗಡಿಪ್ರದೇಶಗಳಲ್ಲೂ ಅನ್ಯಭಾಷಿಗರು ತುಂಬಿಹೋಗಿರುವುದರಿಂದ ಕನ್ನಡದ ಅಸ್ತಿತ್ವದ ಬಗೆಗಿನ ಸಮಸ್ಯೆ ಮತ್ತು ಇಂಗ್ಲಿಷಿನ ಹಿಡಿತ ಬಲಗೊಳ್ಳುವ ಸಮಸ್ಯೆ ಇತ್ತೀಚೆಗೆ ಕನ್ನಡ ಚಿಂತಕರನ್ನು ಹೆಚ್ಚು ಕಾಡುತ್ತಿದೆ. ವಿಧಾನಸಭೆಯಲ್ಲೂ, ಆಡಳಿತ ಕಚೇರಿಗಳಲ್ಲೂ ಕನ್ನಡೇತರರೇ ತುಂಬಿಹೋಗಿರುವುದರಿಂದ ಕನ್ನಡವನ್ನು ಅನುಷ್ಠಾನಕ್ಕೆ ತರುವ ಯಾವ ಕಾರ್ಯವೂ ಫಲಕಾರಿಯಾಗುತ್ತಿಲ್ಲವೆಂದೂ, ಇಂಗ್ಲಿಷ್ ಭಾಷೆಯ ಬಳಕೆ ಬಲಗೊಳ್ಳಲು ಈ ಅನ್ಯಭಾಷೆಯ ಅಧಿಕಾರಿಗಳೇ ಕಾರಣರೆಂದೂ, ಹೆಚ್ಚಿನವರೂ ಅಭಿಪ್ರಾಯಪಡುತ್ತಾರೆ. ಆಡಳಿತದಲ್ಲಿ ಕನ್ನಡವು ಅನುಷ್ಠಾನಕ್ಕೆ ಬಾರದುದರಿಂದ ಸರಕಾರೀ ಉದ್ಯೋಗ ನೇಮಕಾತಿಯಲ್ಲೂ ಕನ್ನಡಕ್ಕೆ ಪ್ರಾಧಾನ್ಯ ದೊರಕುವುದು ಸಾಧ್ಯವಾಗಿಲ್ಲ. ಆದ್ದರಿಂದ, ಕನ್ನಡಿಗರಲ್ಲದವರಿಗೇ ಆಡಳಿತದಲ್ಲಿ ಪ್ರಾಧಾನ್ಯ ದೊರಕುತ್ತಿದೆ; ಇದರ ಪರಿಣಾಮ ಎಲ್ಲ ಕ್ಷೇತ್ರಗಳಲ್ಲೂ ಕಾಣಿಸಿಕೊಂಡಿದೆ – ಎಂದು ಹೇಳುತ್ತಾರೆ. ವಾಸ್ತವವಾಗಿ, ಆಡಳಿತವೂ ಅಧಿಕಾರಿಗಳೂ ಜನಾಭಿಪ್ರಾಯಕ್ಕೆ ಅನುಗುಣವಾಗಿಯೇ ಇರಬೇಕಾಗಿರುವುದು ನಿಜವಾದ ಪ್ರಜಾಪ್ರಭುತ್ವವಾದ್ದರಿಂದ, ಮೊದಲು ಜನರಲ್ಲಿ ಈ ಬಗೆಗಿನ ಎಚ್ಚರವೂ, ಅದನ್ನು ವಿರೋಧಿಸುವ ಶಕ್ತಿಯೂ ಮೂಡಿಬರಬೇಕಾದದ್ದು ಅನಿವಾರ್ಯವಾಗಿದೆ. ಜನರು ಆಡಳಿತದ ಸ್ವರೂಪವನ್ನು ನಿರ್ಧರಿಸುವ ಬದಲು, ಆಡಳಿತ ನಡೆಸುವವರು ಜನಾಭಿಪ್ರಾಯವನ್ನು ತಮ್ಮ ಅಗತ್ಯಗಳಿಗನುಗುಣವಾಗಿ ನಿಯಂತ್ರಿಸಿ ರೂಪಿಸುವುದು ಪ್ರಜಾಪ್ರಭುತ್ವದ ವೈಫಲ್ಯವನ್ನು ಸೂಚಿಸುತ್ತದೆ. ಆಡಳಿತ, ಶಿಕ್ಷಣ, ಸಮೂಹಮಾಧ್ಯಮಗಳು, ಚಳವಳಿಗಳು – ಇವೆಲ್ಲ ಜನರ ಅಭಿಪ್ರಾಯವನ್ನು, ''ಜನರ ನಿಯಂತ್ರಿತ ಅಭಿಪ್ರಾಯಗಳು ಆಡಳಿತ – ಸಂವಿಧಾನ ಇತ್ಯಾದಿಗಳನ್ನು ಪರಸ್ಪರ ರೂಪಿಸುವುದರಿಂದ, ಜಾಗೃತಿ ಮೊದಲು

ಯಾವ ಕಡೆಯಿಂದ ಹೊರಡಬೇಕು — ಎಂಬುದು ಇಲ್ಲಿ ಸಮಸ್ಯೆಯಾಗಿದೆ. ಮೊದಲು ವ್ಯಕ್ತಿಯಿಂದ ಹೊರಟ ಜಾಗೃತಿ ಸಾಮಾಜಿಕವಾಗಿ, ಮತ್ತು ಸಾಮಾಜಿಕವಾಗಿ ರೂಪುಗೊಂಡ ಜಾಗೃತಿ ವ್ಯಕ್ತಿಯನ್ನು ಜಾಗೃತಗೊಳಿಸುವುದು — ಎರಡೂ ಜೊತೆಜೊತೆಯಲ್ಲಿ ನಡೆಯುವುದು ಮುಖ್ಯ.

## 4. ಕನ್ನಡ ಅನುಷ್ಠಾನ ಹೇಗೆ

ಎಲ್ಲ ಕ್ಷೇತ್ರಗಳಲ್ಲೂ ಇಂಗ್ಲಿಷ್ ಪ್ರಭಾವ ಅತಿಯಾಗಿ ಹೋಗಿರುವುದರಿಂದ ಎಲ್ಲೆಡೆ ಕನ್ನಡದ ಅನುಷ್ಠಾನ ಅಗತ್ಯವೆಂದು ಕನ್ನಡ ಚಿಂತಕರು ಅಭಿಪ್ರಾಯಪಡುತ್ತಾರೆ. ಅದರಲ್ಲಿ ಮುಖ್ಯವಾದದ್ದು ಆಡಳಿತ, ಶಿಕ್ಷಣ, ಸಮೂಹಮಾಧ್ಯಮಗಳು. ಇವು ಉಳಿದ ಕ್ಷೇತ್ರಗಳ ಮೇಲೆ ಪ್ರಭಾವ ಬೀರುವುದರಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ಇಂಗ್ಲಿಷಿನ ಹಿಡಿತ ಈ ಮೂರರಲ್ಲೂ ಬಲವಾಗಿರುವುದರಿಂದ, ಕನ್ನಡವನ್ನು ಈ ಕ್ಷೇತ್ರಗಳಲ್ಲಿ ನೆಲೆಗೊಳಿಸಬೇಕಾದದ್ದು ಬಹಳ ಮುಖ್ಯ — ಎಂದು ಹೇಳುತ್ತಾರೆ. ರಾಜ್ಯದ ಎಲ್ಲ ಘಟಕಗಳ, ಎಲ್ಲ ಸಂಸ್ಥೆಗಳ ನಿಲುವನ್ನು ಪ್ರಭಾವಿಸುವುದು ಸರಕಾರವಾದ್ದರಿಂದ, ಮೊದಲು ಸರಕಾರದಲ್ಲೇ ಕನ್ನಡದ ಅನುಷ್ಠಾನ ಅಗತ್ಯ — ಎಂದು ಹೆಚ್ಚಿನ ಚಿಂತಕರ ಅಭಿಪ್ರಾಯ. ಆದರೆ ಸರಕಾರ ತನ್ನ ನಿಲುವನ್ನು, ಅಭಿಪ್ರಾಯವನ್ನು ರೂಪಿಸುವುದು ಮತ ಗಳಿಕೆಗಾಗಿ; ಆದ್ದರಿಂದ ಜನರ ಮೆಚ್ಚುಗೆಯನ್ನು, ಅವರ ಹೋರಾಟವನ್ನು ಗಮನಿಸಿ, ಅದಕ್ಕೆ ತಕ್ಕಂತೆ ಸರಕಾರ ತನ್ನ ನಿಲುವನ್ನು ರೂಪಿಸುವುದರಿಂದ ಮೊದಲು ಜನರಲ್ಲಿ ಕನ್ನಡಾನುಷ್ಠಾನದ ಅರಿವು ಮೂಡಬೇಕು, ಹೋರಾಟವಾಗಬೇಕು — ಎಂದು ಕೆಲವರ ವಾದ. ಚಳವಳಿಗಳಿಂದ ಪ್ರಭಾವಗಳು ಉಂಟಾಗುವುದು ಸಾಧ್ಯವಾದರೂ ಚಳವಳಿಗಾರರು ಕೇವಲ ಘೋಷಣೆ ಕೂಗುವುದರಿಂದ, ತಮ್ಮ ಕಾರ್ಯಗಳನ್ನು ಸಾಧಿಸಿಕೊಂಡು ಕನ್ನಡದ ವಿಷಯದಲ್ಲಿ ಅಪ್ರಾಮಾಣಿಕರಾಗಿರುವುದರಿಂದ ಒಟ್ಟು ಸಮಸ್ಯೆಯೇ ಲಘುವಾಗಿಬಿಡುತ್ತದೆಯೆಂಬುದನ್ನು ಕೆಲವರು ಗಮನಿಸುತ್ತಾರೆ. ಆಡಳಿತದಲ್ಲಿ ಕನ್ನಡ ಬಳಕೆ ಸಮರ್ಥವಾಗಿ ಜಾರಿಗೆ ಬರಲು ಕನ್ನಡ ಪಕ್ಷವೊಂದು ಅಗತ್ಯ; ಅದರ ಮೂಲಕ ಕನ್ನಡ ಬಳಕೆಗೆ ಹೋರಾಟ ನಡೆಯಬಹುದೆಂದೂ ಕೆಲವರು ಅಭಿಪ್ರಾಯಪಡುತ್ತಾರೆ.

ಕನ್ನಡವನ್ನೇ ಎಲ್ಲರೂ ಬಳಸುವಂತಾಗಲು ಕನ್ನಡ ಇತರ ಭಾಷೆಗಳನ್ನು — ಮುಖ್ಯವಾಗಿ ಇಂಗ್ಲಿಷನ್ನು ಆಶ್ರಯಿಸುವುದು ನಿಲ್ಲಬೇಕು. ಇದರಿಂದ ಕನ್ನಡದಲ್ಲಿ ಗ್ರಂಥಾಭಿವೃದ್ಧಿ

ಇಂಗ್ಲಿಷ್ ಹಾಗೂ ಇನ್ನಿತರ ಸಮೃದ್ಧ ಭಾಷೆಗಳಿಂದ ವೈಜ್ಞಾನಿಕ ಗ್ರಂಥಗಳ ಭಾಷಾಂತರ, ಅದಕ್ಕೆ ಅಗತ್ಯವಾದ ಪಾರಿಭಾಷಿಕ ಪದಗಳ ನಿರ್ಮಾಣ, ನ್ಯಾಯಾಲಯಗಳಲ್ಲಿ ಕನ್ನಡ ಬಳಕೆಯಾಗಲು ಕಾನೂನು ಗ್ರಂಥಗಳ ರಚನೆ, ಆಡಳಿತದಲ್ಲಿ ಕನ್ನಡವನ್ನು ರೂಢಿಗೆ ತರಲು ಸಹಾಯಕವಾದ ಆಡಳಿತಪದಕೋಶಗಳು — ಇವುಗಳನ್ನು ಒದಗಿಸುವುದರಿಂದಲೇ ಕನ್ನಡದ ಅನುಷ್ಠಾನ ಸಾಧ್ಯ — ಎಂಬ ಅಭಿಪ್ರಾಯವನ್ನು ಹಲವರು ವ್ಯಕ್ತಪಡಿಸುತ್ತಾರೆ. ಎಲ್ಲದಕ್ಕಿಂತ ಮುಖ್ಯವಾಗಿ, ಎಲ್ಲ ಸರಕಾರೀ ಕಚೇರಿಗಳಲ್ಲೂ ಇಂಗ್ಲಿಷ್ ಬೆರಳಚ್ಚು ಯಂತ್ರಗಳನ್ನು ತೆಗೆದು ಹಾಕಿ, ಕನ್ನಡ ಬೆರಳಚ್ಚು ಯಂತ್ರಗಳನ್ನೇ ಒದಗಿಸಬೇಕೆಂದೂ, ಈಗಾಗಲೇ ಇರುವ ಇಂಗ್ಲಿಷ್ ಬೆರಳಚ್ಚುಗಾರರಿಗೆ ಕನ್ನಡ ಬೆರಳಚ್ಚಿನ ತರಬೇತಿ ಕೊಡಿಸಬೇಕೆಂದೂ ಹೆಚ್ಚಿನವರೂ ಒತ್ತಾಯಿಸುತ್ತಾರೆ.

"ಮೊದಲು ಕಚೇರಿಗಳಿಂದ ಇಂಗ್ಲಿಷ್ ಬೆರಳಚ್ಚು ಯಂತ್ರಗಳನ್ನು ತೆಗೆಸಿ ಹಾಕುವ ಕೆಲಸ ಆಗಬೇಕು. ಇಂಗ್ಲಿಷ್ ಬೆರಳಚ್ಚುಗಾರರಿಗೆ ಕನ್ನಡ ತರಬೇತಿ ಕಡ್ಡಾಯ ಮಾಡಬೇಕು. ಇಷ್ಟರಿಂದಲೇ ಆಡಳಿತದಲ್ಲಿ ಕನ್ನಡ ಮುಕ್ಕಾಲುಪಾಲು ನೆಲೆಯಾಗುತ್ತದೆ." [38]

ಕನ್ನಡ ಭಾಷೆಯ ಬಗೆಗೆ ಜನರಲ್ಲಿ ಅಭಿಮಾನ, ಪ್ರೀತಿ ಉಂಟಾಗಲು ಕನ್ನಡಿಗರು ಆರ್ಥಿಕವಾಗಿ ಸುಧಾರಿಸಬೇಕು; ಕನ್ನಡದ ಮೂಲಕವೇ ಜನರ ಜೀವನ ಸಾಧ್ಯ — ಎಂಬ ಪರಿಸ್ಥಿತಿ ನಿರ್ಮಾಣವಾಗಬೇಕು — ಎಂದು ಹಲವರು ಅಭಿಪ್ರಾಯಪಡುತ್ತಾರೆ. ಇದಕ್ಕೆ ಮುಖ್ಯವಾಗಿ ಸರಕಾರೀ ಉದ್ಯೋಗ ದೊರಕಲು ಕನ್ನಡ ತಿಳಿದಿರುವುದನ್ನು ಕಡ್ಡಾಯ ಮಾಡಬೇಕು. ಖಾಸಗಿ ಉದ್ಯಮ — ಸಂಸ್ಥೆಗಳಲ್ಲೂ ಕಾರ್ಖಾನೆಗಳಲ್ಲೂ ಕನ್ನಡ ಭಾಷೆಯ ಬಳಕೆ ಕನ್ನಡ ಭಾಷೆಯ ಬೆಳವಣಿಗೆಗೆ ಕಾರಣವಾದೀತೆಂದೂ ಹಲವರ ಅಭಿಪ್ರಾಯಪಡುತ್ತಾರೆ.[39]

ಈ ಎಲ್ಲ ಅಭಿಪ್ರಾಯಗಳಿಂದ ಸ್ಪಷ್ಟಪಡುವ ಸಂಗತಿ: ಕನ್ನಡ ಭಾಷೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕೆ ಹಲವು ವಲಯಗಳಲ್ಲಿ ಅದರ ಬಳಕೆ ಚೆನ್ನಾಗಿ ನಡೆಯಬೇಕಾಗಿದೆ. ಒಂದೊಂದೂ ವಲಯವೂ ತನ್ನದೇ ಆದ ಸಮಸ್ಯೆಗಳನ್ನು ಹೊಂದಿವೆ. ಉಳಿದ ವಲಯಗಳೊಂದಿಗೆ ಅವು ನೇರವಾದ ಸಂಬಂಧಗಳನ್ನು ಹೊಂದಿರುವುದರಿಂದ, ಸಮಸ್ಯೆಗಳ ಪರಿಹಾರ ಅಷ್ಟು ಸುಲಭವಲ್ಲ. ಎಲ್ಲ ಕಡೆಗಳಲ್ಲೂ ಕೆಲಸವಾಗಬೇಕಾದರೆ ಎಲ್ಲರೂ ಕೆಲಸ ಮಾಡಬೇಕು. ಇಲ್ಲಿ ಕೂಡ ವ್ಯಕ್ತಿ —ವ್ಯಕ್ತಿಗಳೊಳಗೆ ಕನ್ನಡ ನಿಷ್ಠೆ, ಕನ್ನಡ ಅನುಷ್ಠಾನ ಮೊದಲು

ಸಾಧ್ಯವಾಗಬೇಕು — ಎಂಬ ವಿಚಾರವೇ ಕೊನೆಗೂ ನಿಲ್ಲುತ್ತದೆ. ಒಬ್ಬ ವ್ಯಕ್ತಿ ತನ್ನಲ್ಲಿ ತಾನು ಪೂರ್ಣವಾಗಿ ಒಂದು ಕೆಲಸ ಮಾಡಲಾರದೆ ಆ ಕೆಲಸದ ಕುರಿತು ಮಾತನಾಡುವದೆಂದರೆ ಅದು ಪ್ರಾಮಾಣಿಕತನವಾಗಲಾರದು; ಆದ್ದರಿಂದ ಕನ್ನಡದ ಬಗ್ಗೆ ನಿಜವಾದ ಅಭಿಮಾನ, ನಿಷ್ಠೆ ಉಳ್ಳವರು ತಾವು ಕನ್ನಡದ ಕೆಲಸವನ್ನು ಮಾಡುವುದೇ ಕನ್ನಡದ ನಿಜವಾದ ಕೆಲಸ; ತನ್ನ ಮಟ್ಟಿಗೆ ತಾನು ಕನ್ನಡವನ್ನು ಬೆಳೆಸುವ ಕೆಲಸ ಮಾಗಿಕೊಳ್ಳುತ್ತ ಹೋದರೆ ಮಾತ್ರ ಕನ್ನಡದ ಬೆಳವಣಿಗೆಂಯಾಗಬಲ್ಲುದು; ಒಬ್ಬ ವ್ಯಕ್ತಿ ತಾನು ಪರಿಪೂರ್ಣವಾಗಿ ಕೆಲಸ ಮಾಡುವುದರಿಂದ ಮಾತ್ರವೇ ಸಮಾಜದ ಮೇಲೆ ಪ್ರಭಾವ ಬೀರಬಲ್ಲ — ಎಂಬುದೂ ಇಲ್ಲಿ ಮುಖ್ಯ. ವ್ಯಕ್ತಿ ನೆಲೆಂಯಿಂದ ಕೆಲಸ ಮಾಡಿದ ಶಿವರಾಮಕಾರಂತ ಮೊದಲಾದವರು ಮುಖ್ಯರಾಗುವುದು ಈ ಕಾರಣಕ್ಕಾಗಿಂಯೇ.

## 5. ಇಂಗ್ಲಿಷ್ — ಕನ್ನಡ ಸಂಬಂಧ

ಸ್ವಾತಂತ್ರ್ಯ ದೊರಕಿದ ಬಳಿಕ ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತು ನಡೆದ ಚಿಂತನೆಗಳು ಇಲ್ಲಿನ ಸಾಮಾಜಿಕ, ರಾಜಕೀಂಯ ಸನ್ನಿವೇಶಗಳಿಗೆ ಸ್ಪಂದಿಸುವ ಸಂದರ್ಭಗಳಲ್ಲಿ ವ್ಯಕ್ತವಾಗಿವೆ. ಸ್ವಾತಂತ್ರ್ಯ ಲಭಿಸಿದ ಬಳಿಕ ಕನ್ನಡ ಏಕೀಕರಣವಾಗುವವರೆಗೆ ಇಂಗ್ಲಿಷ್ ಭಾಷೆಂಯ ಬಗೆಗೆ ಅಷ್ಟು ಪ್ರಾಮುಖ್ಯತೆಂಯನ್ನು ಕೆಲವರು ನೀಡಿರಲಿಲ್ಲ. ಸ್ವಾತಂತ್ರ್ಯ ದೊರಕಿದ ಉತ್ಸಾಹದಲ್ಲಿ ರಾಷ್ಟ್ರೀಂಯತೆಂಯ ಕಾವು ಇನ್ನೂ ಉಳಿದಿದ್ದಾಗ, ಹಿಂದಿ ಭಾಷೆಂಯ ಬಗೆಗೆ ಗೌರವಭಾವ ಉಳಿದಿತ್ತು. ಆಗ ಇಂಗ್ಲಿಷ್ ಭಾಷೆಂಯ ಅವಶ್ಯಕತೆಂಯನ್ನು ಅಲಕ್ಷಿಸಿದ್ದ ರೆಂದಲ್ಲ; ಆದರೆ ಹಿಂದಿ ಅದಕ್ಕಿಂತ ಮುಖ್ಯವೆನಿಸಿತ್ತು. 1956 ರಲ್ಲಿ ಕರ್ನಾಟಕ ಏಕೀಕರಣ ವಾದ ಬಳಿಕ ಕನ್ನಡಕ್ಕೆ ಎಲ್ಲ ಕ್ಷೇತ್ರಗಳಲ್ಲೂ ಪ್ರಾಧಾನ್ಯ ದೊರಕುವದೆಂದು ಎಲ್ಲರ ನಿರೀಕ್ಷೆಂಯಾಗಿತ್ತು. ಆಡಳಿತ, ಶಿಕ್ಷಣ ಹಾಗೂ ಇನ್ನಿತರ ವ್ಯವಹಾರಗಳಲ್ಲಿ ತಕ್ಕುದಾದ ಪ್ರಾಧಾನ್ಯ ಲಭಿಸಿರುತ್ತಿದ್ದರೆ ಇಂಗ್ಲಿಷ್ ಹಾಗೂ ಕನ್ನಡದ ಸಂಬಂಧ ಇಷ್ಟೊಂದು ಹದಗೆಡು ತ್ತಿರಲಿಲ್ಲ ಅನ್ನಿಸುತ್ತದೆ. ಆಡಳಿತದಲ್ಲಿ ಹೇಗೋ ಹಾಗೆಂಯೇ ಶಿಕ್ಷಣದಲ್ಲೂ ಇಂಗ್ಲಿಷ್ ಭಾಷೆಗೆ ಮಿತಿಮೀರಿದ ಪ್ರಾಧಾನ್ಯ ಲಭಿಸಿದ್ದರಿಂದ ವೃತ್ತಿಶಿಕ್ಷಣ, ವೈಜ್ಞಾನಿಕ ಶಿಕ್ಷಣಗಳಿಗೆ ಇಂಗ್ಲಿಷ್ ಕಲಿಂಯುವುದು ಅತ್ಯಂತ ಅನಿವಾರ್ಯವೆಂಬ ಪರಿಸ್ಥಿತಿ ನಿರ್ಮಾಣವಾದುದರಿಂದ ಪ್ರಾಥಮಿಕ ಹಂತದಿಂದಲೂ ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣ ನೀಡಬೇಕೆಂಬ ಮನೋಭಾವ ಜನಸಾಮಾನ್ಯ ರಲ್ಲಿ — ಮುಖ್ಯವಾಗಿ ನಗರದ ಶ್ರೀಮಂತ ಹಾಗೂ ಮಧ್ಯಮ ವರ್ಗಗಳಲ್ಲಿ — ಉಂಟಾಂಯಿತು.

ರಾಜಕೀಯ, ಸಾಮಾಜಿಕ ಜೀವನದಲ್ಲಿ ಹೇಗೆ ಅಸಮಾನತೆ ಮುಂದುವರಿದುಕೊಂಡು ಬಂತೋ, ಅದೇ ರೀತಿ ಶೈಕ್ಷಣಿಕ ಕ್ಷೇತ್ರದಲ್ಲೂ ಇಂಗ್ಲಿಷ್ ಶ್ರೇಷ್ಠ, ಕನ್ನಡ ಕನಿಷ್ಠ — ಎಂಬ ತಾರತಮ್ಯ ಬೆಳೆಯುತ್ತ ಬಂತು. ಇದರಿಂದ ಇಂಗ್ಲಿಷ್ ಕಲಿತವರು ಇಂಗ್ಲಿಷಿನ ಕುರಿತ ನಿಷ್ಠೆ ಬೆಳೆಸುವುದರಲ್ಲಿಯೇ ನಿರತರಾದರು; ಕನ್ನಡ ಅಭಿಮಾನಿಗಳು ಅದರ ವಿರುದ್ಧ ಹೋರಾಡುವುದರಲ್ಲಿಯೇ ನಿರತರಾದರು. ಎರಡರ ನಡುವಿನ ಸಂಬಂಧದ ಕುರಿತು ಚಿಂತಿಸಿದವರು ಹೆಚ್ಚಾಗಿ ಕನ್ನಡ ಸಾಹಿತಿಗಳು ಮತ್ತು ಕನ್ನಡಚಿಂತಕರು. ಇವರಿಗೆ ಕನ್ನಡವನ್ನು ಉಳಿಸುವುದಷ್ಟೇ ಸಾಕಾಗಿರಲಿಲ್ಲ; ಬೆಳೆಸುವುದೂ ಅಷ್ಟೇ ಮುಖ್ಯವಾಗಿತ್ತು. ಇಂಗ್ಲಿಷ್ ಭಾಷೆಯ ಅವಶ್ಯಕತೆ ಮತ್ತು ಅದರ ಮೂಲಕ ದೊರಕುವ ಜ್ಞಾನವನ್ನು ಕನ್ನಡದಲ್ಲಿ ತರುವ ಅಗತ್ಯ ಅವರ ಚಿಂತನೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಂಗ್ಲಿಷಿಗೆ ಪೂರ್ತಿಯಾಗಿ ನಮ್ಮನ್ನು ಒಪ್ಪಿಸಿ ಬಿಡುವ ಅಪಾಯಕ್ಕೂ, ಇಂಗ್ಲಿಷ್ ಬೇಡವೇ ಬೇಡವೆಂದು ಅದನ್ನು ಅಟ್ಟಿಬಿಡುವ ಅತಿರೇಕಕ್ಕೂ ನಡುವೆ ಕನ್ನಡತನವನ್ನು ಉಳಿಸಿಕೊಳ್ಳುವ, ಕನ್ನಡವನ್ನು ಶ್ರೀಮಂತ ಭಾಷೆಯನ್ನಾಗಿ ಮಾಡುವ ಸಾಧ್ಯತೆ ಅಡಗಿರುವುದನ್ನು ಹಲವು ಚಿಂತಕರು ಕಂಡುಕೊಂಡಿದ್ದಾರೆ. ಅದನ್ನು ಅಧ್ಯಯನ ಮಾಡುವುದು ಇಂದಿನ ಅಗತ್ಯಗಳಿಗೆ ಉಪಯುಕ್ತವಾಗಬಲ್ಲ ಚಿಂತನೆಯನ್ನು ರೂಪಿಸುವಲ್ಲಿ ಸಹಾಯಕವಾದೀತು ಎನ್ನಿಸುತ್ತದೆ.

ಸ್ವಾತಂತ್ರ್ಯಾನಂತರ ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತು ನಡೆದ ಚಿಂತನೆಗಳಲ್ಲಿ ಪ್ರಮುಖವಾಗಿ ಮೂರು ಅಭಿಪ್ರಾಯಗಳನ್ನು ಕಾಣಬಹುದು.

1) ಇಂಗ್ಲಿಷ್ ಅಗತ್ಯ ಅತ್ಯಂತ ಹೆಚ್ಚಾಗಿರುವುದರಿಂದ, ಈಗಾಗಲೇ ಆಡಳಿತ, ಶಿಕ್ಷಣ, ವಾಣಿಜ್ಯ—ವ್ಯವಹಾರಗಳಲ್ಲಿ ಅದು ರೂಢಿಯಾಗಿರುವುದರಿಂದ, ಅದೇ ನಮಗೆ ಮುಖ್ಯ ಭಾಷೆಯಾಗಿರಬೇಕು. ವಿಜ್ಞಾನ, ವೈದ್ಯಕೀಯ, ಇಂಜಿನಿಯರಿಂಗ್ ವಿದ್ಯಾಭ್ಯಾಸಕ್ಕೂ ಉತ್ತಮ ಉದ್ಯೋಗಗಳನ್ನು ಸಂಪಾದಿಸುವುದಕ್ಕೂ ಇಂಗ್ಲಿಷ್ ಜ್ಞಾನ ಅತ್ಯಗತ್ಯ. ಅದಲ್ಲದೆ, ಕರ್ನಾಟಕದ ಹೊರಗಡೆ, ವಿದೇಶಗಳಲ್ಲಿ ಹೋಗಿ ವ್ಯವಹರಿಸಲು ಇಂಗ್ಲಿಷ್ ಭಾಷೆ ಅನಿವಾರ್ಯವಾಗಿ ಬೇಕು. ಆದ್ದರಿಂದ ಅದೊಂದೇ ನಮ್ಮ ಜೀವನದಲ್ಲಿ ಅತಿಮುಖ್ಯ ಭಾಷೆಯಾಗಿರಬೇಕು. ಕನ್ನಡದಿಂದ ಹೆಚ್ಚಿನ ಪ್ರಯೋಜನವಿಲ್ಲ.

2) ಕನ್ನಡ ಭಾಷೆ ನಾಶವಾಗುವ ಹಂತದಲ್ಲಿದೆ. ಆಡಳಿತ, ಶಿಕ್ಷಣ, ನ್ಯಾಯಾಲಯ,

ಉದ್ಯಮ ಸಂಸ್ಥೆಗಳು, ವ್ಯವಹಾರ ಕೇಂದ್ರಗಳು, ಪತ್ರಿಕೆಗಳು — ಎಲ್ಲ ಕ್ಷೇತ್ರಗಳಲ್ಲೂ
ಇಂಗ್ಲಿಷ್ ಹಾಗೂ ಹಿಂದಿ ವ್ಯಾಪಿಸಿಕೊಂಡಿದೆ; ಅವು ಕನ್ನಡವನ್ನು ಕ್ಷೀಣವಾಗಿಸುತ್ತವೆ.
ಕನ್ನಡಿಗರ ಅಭಿವೃದ್ಧಿಗೆ ಕರ್ನಾಟಕದಲ್ಲಿ ಕನ್ನಡಕ್ಕೇ ಪ್ರಾಧಾನ್ಯವಿರಬೇಕು. ಇಂಗ್ಲಿಷ್, ಹಿಂದಿ
ಹಾಗೂ ಇನ್ನಿತರ ಭಾಷೆಗಳಿಗೆ ಇಲ್ಲಿ ಪ್ರಾಧಾನ್ಯವಿರಬಾರದು. ಆಡಳಿತ, ಶಿಕ್ಷಣ, ನ್ಯಾಯಾಲಯ,
ಸಮೂಹಮಾಧ್ಯಮಗಳಲ್ಲಿ ಕನ್ನಡ ಏಕೈಕ ಭಾಷೆಯಾಗಿರಬೇಕು.

3) ವಿಶಾಲ ಪ್ರಪಂಚದೊಂದಿಗೆ ಸಂಪರ್ಕವಿಟ್ಟುಕೊಳ್ಳಲು ಹಾಗೂ ವಿವಿಧ ಜ್ಞಾನ
ಶಾಖೆಗಳಿಗೆ (ವಿಜ್ಞಾನ,ಮಾನವಿಕ) ಸಂಬಂಧಿಸಿದಂತೆ ನಾವು ತಿಳಿದುಕೊಳ್ಳಲು ಇಂಗ್ಲಿಷ್ ಭಾಷೆ
ಯನ್ನು ಅತ್ಯಗತ್ಯವಾಗಿ ಕಲಿಯಬೇಕು. ಆದರೆ ಅಷ್ಟೇ ಅಲ್ಲ; ಅದನ್ನು ಕನ್ನಡದಲ್ಲಿ
ಸಮರ್ಥವಾಗಿ ಅಭಿವ್ಯಕ್ತಿಗೊಳಿಸುವ ಮೂಲಕ ಕನ್ನಡಿಗರ ಜ್ಞಾನವಲಯವನ್ನು ವಿಸ್ತರಿಸಬೇಕು.
ಶಿಕ್ಷಣದಲ್ಲಿ ವಿಜ್ಞಾನ ವಿಷಯಗಳನ್ನು ಚೆನ್ನಾಗಿ ಬೋಧಿಸಲು ಇಂಗ್ಲಿಷ್ ಅಗತ್ಯ; ಅದನ್ನು
ಅಲ್ಲಗಳೆಯಲಾಗದು. ಆದರೆ, ಅದರಿಂದ ಇಂಗ್ಲಿಷ್ ಒಂದೇ ಶ್ರೇಷ್ಠ; ಕನ್ನಡ ಕನಿಷ್ಠ —
ಎಂಬಂತಾಗಬಾರದು. ಕನ್ನಡಭಾಷೆ ಸಮೃದ್ಧವಾಗಿ, ಎಲ್ಲ ಜ್ಞಾನವನ್ನೂ ಶೇಖರಿಸಿಕೊಳ್ಳ
ಬೇಕು. ಅಲ್ಲಿಯವರೆಗೂ ಇಂಗ್ಲಿಷಿನ ಅವಲಂಬನೆ ಅಗತ್ಯ. ಇಂಗ್ಲಿಷ್–ಕನ್ನಡ ಎರಡರ
ಸಂಬಂಧ ಈ ರೀತಿ ಸಮರಸದ್ದಾಗಿರಬೇಕು; ಕನ್ನಡಿಗರನ್ನು ಬೆಳೆಸುವಂತಹದಾಗಿರಬೇಕು.

ಮೊದಲ ಎರಡು ಅಭಿಪ್ರಾಯಗಳಲ್ಲಿ ಕೆಲವು ಸತ್ಯಸಂಗತಿಗಳಿವೆ. ಆದರೆ ಅವುಗಳಲ್ಲಿ
ಇಂಗ್ಲಿಷ್ ಅಥವಾ ಕನ್ನಡ — ಇವುಗಳಲ್ಲಿ ಒಂದು ಭಾಷೆ ಇಲ್ಲದಿದ್ದರೆ ಹೆಚ್ಚಿನ ನಷ್ಟವೇನೂ
ಆಗದೆಂದೂ, ಆ ಇನ್ನೊಂದು ಭಾಷೆಯನ್ನು ಬಿಟ್ಟರೆ ಮಾತ್ರ ದುರಂತ ಕಾದಿದೆ ಎಂದೂ
ಹೇಳಲಾಗಿದೆ. ಈ ಎರಡು ಅಭಿಪ್ರಾಯಗಳೂ ಹೆಚ್ಚುಕಡಿಮೆ ಒಂದಕ್ಕೊಂದು ವಿರುದ್ಧ
ವಾಗಿರುವುದರಿಂದ, ಇವೆರಡೂ ಸತ್ಯವಾಗಿರುವುದು ಸಾಧ್ಯವಿಲ್ಲ. ಆದ್ದರಿಂದ, ಅವುಗಳಲ್ಲಿ
ಮಿತಿಗಳಿವೆ. ಆ ಮಿತಿಗಳನ್ನು ಅರಿತುಕೊಂಡು, ನಿಜವಾದ ಸಮಸ್ಯೆ ಯಾವುದು, ಅದರ
ವಿವಿಧ ಪಾರ್ಶ್ವಗಳೇನು — ಇವುಗಳನ್ನು ಗಮನಿಸಿದ ಮೂರನೇ ಅಭಿಪ್ರಾಯದಲ್ಲಿ ಕನ್ನಡ,
ಇಂಗ್ಲಿಷ್ ಎರಡೂ ಅತ್ಯಂತ ಮುಖ್ಯವಾದ ಭಾಷೆಯಾಗುತ್ತದೆ. ಅವುಗಳೆರಡೂ ಅತ್ಯಗತ್ಯ
ವೆಂದೂ, ಅವುಗಳ ನಡುವಿನ ಸಂಬಂಧ ಸಮರ್ಪಕವಾದ ರೀತಿಯಲ್ಲಿದ್ದರೆ ನಮ್ಮ ನಾಡು,
ನುಡಿ ಅಭಿವೃದ್ಧಿಹೊಂದಬಹುದೆಂದೂ, ಬೆಳವಣಿಗೆಗೆ ಇದಲ್ಲದೆ ಬೇರೆ ದಾರಿಯೇ ಇಲ್ಲವೆಂದೂ
ಮೂರನೇ ಅಭಿಪ್ರಾಯ ನಂಬುತ್ತದೆ. ಮೊದಲ ಎರಡು ಅಭಿಪ್ರಾಯಗಳಿಗಿಂತ ಮೂರನೇ

ಅಭಿಪ್ರಾಯವು ವಾಸ್ತವ ಸ್ಥಿತಿಗತಿಗಳಿಗೆ ಮತ್ತು ಪ್ರಸ್ತುತವಾಗಬಲ್ಲ ಯೋಜನೆಗಳಿಗೆ ಹೆಚ್ಚು ಹತ್ತಿರವಾಗಿರುವುದರಿಂದ, ಅದರ ವ್ಯಾಪ್ತಿಯಲ್ಲಿ ಬರುವ ಚಿಂತನೆಗಳನ್ನು ಇಂಗ್ಲಿಷ್-ಕನ್ನಡ ಸಂಬಂಧದ ಕುರಿತ 'ಚಿಂತನೆ' ಗಳಿಗೆ ಸಂಬಂಧಿಸಿದಂತೆ, ವಿಶೇಷವಾಗಿ ಪರಿಶೀಲಿಸುವುದು ಉಪಯುಕ್ತವಾಗಬಲ್ಲುದು.

ಇಂಗ್ಲಿಷ್ — ಕನ್ನಡ ಸಂಬಂಧ ಸಮರಸದ್ದಾಗಿರಬೇಕು; ಎರಡೂ ಅತ್ಯಂತ ಅಗತ್ಯ — ಎನ್ನುವ ಚಿಂತನೆಯಲ್ಲಿ, ಇನ್ನೂ ಸ್ಥೂಲವಾಗಿ ಮತ್ತೆ ಎರಡು ವಿಭಾಗ ಮಾಡಬಹುದು:

ಒಂದು) <u>ಕನ್ನಡಕ್ಕೆ ಪ್ರಾಧಾನ್ಯ</u>: ಇಂಗ್ಲಿಷ್ ಬೆಳೆದ ಭಾಷೆ, ವ್ಯಾಪಕವಾಗಿ ಬಳಕೆಯಲ್ಲಿರುವ ಭಾಷೆ ಎಂಬುದಕ್ಕೂ ನೀತಿಗಳಿವೆ. ಅದರೂ ಕನ್ನಡಕ್ಕಿಂತ ಇಂಗ್ಲಿಷ್ ಸಮೃದ್ಧ, ವ್ಯಾಪ್ತಿ ಅತ್ಯಂತ ಹೆಚ್ಚು. ಅದನ್ನು ಅಗತ್ಯವಾಗಿ ಕಲಿಯಬೇಕು. ಆದರೆ ಅದು ಎಷ್ಟು ಮಂದಿಗೆ, ಎಷ್ಟು ಪ್ರಮಾಣದಲ್ಲಿ, ಹೇಗೆ ಬೇಕು — ಎಂಬುದು ಬಹಳ ಮುಖ್ಯ. ನಮಗೆ ಕನ್ನಡವೇ ಅತ್ಯಂತ ಪ್ರಧಾನವಾದದ್ದರಿಂದ ಇಂಗ್ಲಿಷಿಗೆ ಹೆಚ್ಚಿನ ಕೊಡಬಾರದು.

ಎರಡು) <u>ಇಂಗ್ಲಿಷ್, ಕನ್ನಡ — ಎರಡೂ ಅತ್ಯಗತ್ಯ</u>: ಇಂಗ್ಲಿಷ್ — ಕನ್ನಡಗಳಲ್ಲಿ ಇಂಗ್ಲಿಷ್ ತುಂಬ ಬೆಳೆದ, ವ್ಯಾಪಕವಾದ ಭಾಷೆಯಾದ್ದರಿಂದ ಅದನ್ನು ಅಗತ್ಯವಾಗಿ, ಆದಷ್ಟು ಮಂದಿ ಚೆನ್ನಾಗಿಯೇ ಕಲಿಯಬೇಕು. ಆದರೆ ಇಂಗ್ಲಿಷ್ ಕಲಿತು ಬಹಳಷ್ಟು ತಿಳಿದುಕೊಂಡವರು ಅದರ ವ್ಯಾಮೋಹದಲ್ಲೇ ಇದ್ದುಬಿಡಬಾರದು; ಕನ್ನಡದಲ್ಲಿ ಕೆಲಸ ಮಾಡಬೇಕು. ಇದರಿಂದ ಕನ್ನಡವೂ, ಕನ್ನಡನಾಡೂ ಬೆಳೆಯುತ್ತವೆ.

ಈ ಎರಡು ವಿಭಾಗಗಳಲ್ಲಿರುವ ವ್ಯತ್ಯಾಸ ಅತ್ಯಲ್ಪ. ಎರಡೂ ಇಂಗ್ಲಿಷ್ ಭಾಷೆ ಅತ್ಯಗತ್ಯವೆನ್ನುವುದನ್ನು ಒಪ್ಪುತ್ತವೆ. ಹಾಗೆಯೇ, ಕನ್ನಡದ ಬೆಳವಣಿಗೆಯೂ ಕನ್ನಡಕ್ಕೆ ಪ್ರಾಧಾನ್ಯವೂ ಅಗತ್ಯವೆಂದು ಹೇಳುತ್ತವೆ. ಆದರೆ ಹೀಗೆ ಮಾಡುವಾಗ ಇವೆರಡು ಭಾಷೆಗಳ ನಡುವಿನ ಸಂಬಂಧ ಹೇಗಿರಬೇಕು — ಎಂಬಲ್ಲಿ ವ್ಯತ್ಯಾಸವಿದೆ.

ಮೊದಲನೆಯ ಚಿಂತನೆಯಲ್ಲಿ ಇಂಗ್ಲಿಷನ್ನು ಅಷ್ಟಾಗಿ ಅನ್ವಯಿಸದೆ, ಅದರ ಶ್ರೀಮಂತಿಕೆಯನ್ನು ಮಾತ್ರ ಕನ್ನಡಕ್ಕೆ ತರುವ ಉದ್ದೇಶವಿದೆ. ಎರಡನೆಯದರಲ್ಲಿ ಇಂಗ್ಲಿಷನ್ನು ಹೆಚ್ಚಾಗಿ ಅನ್ವಯಿಸಿ ಕನ್ನಡವನ್ನು ಬೆಳೆಸುವ ಉದ್ದೇಶವಿದೆ. ಎರಡರಲ್ಲಿ ಇಂಗ್ಲಿಷಿನ ವ್ಯಾಪಕತೆಯನ್ನು ಹಾಗೂ ಕನ್ನಡ [illegible] ಶ್ರಮವನ್ನು [illegible]

ಕನ್ನಡ ಬೆಳೆಯುವ, ಸ್ವಾವಲಂಬಿಯಾಗುವ ತುರ್ತನ್ನು ಪ್ರಧಾನವಾಗಿಸಿಕೊಂಡು ಆಕ್ರಮವನ್ನೆದುರಿಸಲು ಮುಂದಾಗುವ ಸವಾಲು ಬೇರೆ. ಕನ್ನಡದ ಕೆಲವು ಪ್ರಮುಖ ಚಿಂತಕರ ಚಿಂತನೆಗಳನ್ನು ಇಲ್ಲಿ ಪರಿಶೀಲಿಸಿದೆ.

## 1. <u>ಇಂಗ್ಲಿಷ್ ಅಗತ್ಯ; ಕನ್ನಡ ಅತ್ಯಗತ್ಯ — ಎನ್ನುವವರು</u>

ಇಂಗ್ಲಿಷ್ ಭಾಷೆಯ ಅನುಕೂಲತೆಗಳನ್ನೂ ಅಗತ್ಯವನ್ನೂ ಕನ್ನಡದ ಅಭಿವೃದ್ಧಿಗೆ ಅದರಿಂದಾಗುವ ಲಾಭವನ್ನೂ ಗಮನಿಸಿ, ಇಂಗ್ಲಿಷ್ ಭಾಷೆಯನ್ನು ಕಲಿಯಬೇಕಾದದ್ದು ಅವಶ್ಯಕ; ಆದರೆ ಅದಕ್ಕಿಂತ ಹೆಚ್ಚಿನ ಪ್ರಾಧಾನ್ಯ ಕನ್ನಡಕ್ಕೇ ಇರಬೇಕೆಂದೂ, ಇಂಗ್ಲಿಷನ್ನು ಎಲ್ಲರೂ ಕಲಿಯಬೇಕಾಗಿಲ್ಲವೆಂದೂ ಯೋಚಿಸುವವರಲ್ಲಿ ಎಸ್.ವಿ. ರಂಗಣ್ಣ, ಕುವೆಂಪು, ಪು.ತಿ.ನ., ದೇಜಗೌ, ಹಾ.ಮಾ.ನಾ. ಪ್ರಮುಖರು. ಇದೇ ಬಗೆಯಲ್ಲಿ ಚಿಂತಿಸುವವರು ಹಲವರು ಈ ವಿಭಾಗದಲ್ಲಿಯೇ ಸೇರುತ್ತಾರೆ; ಆದರೆ ಎಲ್ಲರನ್ನೂ ಇಲ್ಲಿ ಪ್ರತ್ಯೇಕವಾಗಿ ತೆಗೆದುಕೊಂಡಿಲ್ಲ.

ಅ) <u>ಎಸ್.ವಿ. ರಂಗಣ್ಣ</u>: ಎರಡು ಮುಖ್ಯ ವಿಚಾರಗಳನ್ನು ಎಸ್.ವಿ. ರಂಗಣ್ಣನವರು ಹೇಳುತ್ತಾರೆ. ಒಂದು, ಇಂಗ್ಲಿಷನ್ನು ಎಲ್ಲರೂ ಕಲಿಯಬೇಕಾಗಿಲ್ಲ. ಎರಡು, ಸಂಪರ್ಕಕ್ಕಾಗಿ ಇಂಗ್ಲಿಷ್ ಕಲಿಯಬೇಕಾಗಿಲ್ಲ — ಅದು ಅವರವರ ವೈಯುಕ್ತಿಕ ಜವಾಬ್ದಾರಿ, ವೈಯುಕ್ತಿಕ ಸಮಸ್ಯೆ. ''ನಮ್ಮ ಮಧ್ಯೆ ಇಂಗ್ಲಿಷು ಇದ್ದೇ ಇರಬೇಕು; ಅದನ್ನು ಪೂರ್ತಿ ಹೊರಗಟ್ಟಕೂಡದು; ಪ್ರಾಯಶಃ ಹೊರಗಟ್ಟಲಾಗುವುದಿಲ್ಲ'' ಎನ್ನುವ ಎಸ್.ವಿ. ರಂಗಣ್ಣನವರು ಇಂಗ್ಲಿಷ್ ಭಾಷೆಯ ಅವಶ್ಯಕತೆಯನ್ನು ಮನಗಂಡಿದ್ದರೂ, ''ಸಮಸ್ತ ಪ್ರಜೆಗೂ ಅದು ಎಂದಿಗೂ ಅವಶ್ಯಕವಿಲ್ಲ. ಕನ್ನಡವೊಂದರಿಂದಲೇ ಜೀವನ ಸೌಖ್ಯವನ್ನೂ ಆತ್ಮಕಲ್ಯಾಣವನ್ನೂ ಬಹುಭಾಗ ಕನ್ನಡಿಗರು, (ಇತರ ಭಾರತೀಯರು ತಮ್ಮ ತಮ್ಮ ಮಾತೃಭಾಷೆಗಳಿಂದ), ಸಾಧಿಸಿಕೊಳ್ಳಬಹುದು'' ಎನ್ನುತ್ತಾರೆ.[40] ಜ್ಞಾನಾಪೇಕ್ಷಿಗಳಲ್ಲಿ ಸೇಕಡಾ ಹತ್ತು, ಕೊನೆಗೆ ಐದರಷ್ಟು ಮಂದಿಯಾದರೂ ಇಂಗ್ಲಿಷ್ ಕಲಿತು ಪಾಶ್ಚಾತ್ಯರ ಕಲೆ, ಸಾಹಿತ್ಯ, ಶಾಸ್ತ್ರ, ವಿಜ್ಞಾನ, ಯಂತ್ರೋದ್ಯಮಗಳ ಅರಿವನ್ನು ಕನ್ನಡಿಗರಿಗೆ ಮಾಡಿಕೊಡತಕ್ಕದ್ದು — ಎಂದು ಅವರು ಹೇಳುತ್ತಾರೆ.[41]

ಇಲ್ಲಿ ಹತ್ತು ಸೇಕಡಾ ಕಲಿತವರು ಮೇಲೆ ಹೇಳಿದ — ಅವರವರ ಕ್ಷೇತ್ರಗಳ ಪರಿಚಯವನ್ನು ಮಾಡಿಕೊಡಬೇಕು — ಎಂದಾಗ ಆ ಕ್ಷೇತ್ರಗಳಿಗೆ ಸಂಬಂಧಿಸಿ ಕನ್ನಡದಲ್ಲಿ ಕೆಲಸ ಮಾಡುವ

ಧೋರಣೆಯನ್ನು ಕೆಲವರ ಮೇಲೆ ಮಾತ್ರವೇ ಹೊರಿಸಿದಂತಾಗಬಹುದು[42] – ಎಂಬ ಪ್ರಶ್ನೆಯೇಳುತ್ತದೆ. ಶೇಕಡಾ ಹತ್ತು – ಐದು ಜನರಿಂದ ಇಂಗ್ಲಿಷ್ ಮೂಲಕ ದೊರೆಯುವ ಬಲ್ಲ ಜ್ಞಾನವನ್ನು ಕನ್ನಡಕ್ಕೆ ತರುವುದು ಒಂದು ವೇಳೆ ಸಾಧ್ಯವಿದ್ದರೂ, ನೂರಕ್ಕೆ ನೂರು ವಿದ್ಯಾಭ್ಯಾಸವುಳ್ಳ ಕಡೆಗಳಲ್ಲಿ ಮಾತ್ರವೇ ಅದು ಸಫಲವಾಗಬಹುದಲ್ಲದೆ, ಕರ್ನಾಟಕದಲ್ಲಿ ಅಲ್ಲ – ಅನ್ನಿಸುತ್ತದೆ. ವಿದ್ಯಾಭ್ಯಾಸ ಪಡೆದವರೂ ಕಡಿಮೆ, ಅದರಲ್ಲೂ ಇಂಗ್ಲಿಷ್ ಕಲಿತವರು ಮತ್ತೂ ಕಡಿಮೆ. ಅವರಲ್ಲಿ ಕನ್ನಡಾಭಿವೃದ್ಧಿ ಮಾಡುವ ಧೋರಣೆ ತೋರಬಲ್ಲವರು ಇನ್ನಷ್ಟು ಕಡಿಮೆ – ಹೀಗಾಗ, ಅವರಿಂದಷ್ಟೇ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಜ್ಞಾನವನ್ನು ನಿರೀಕ್ಷಿಸುವುದು ಕಷ್ಟ.

'ಸಂಪರ್ಕ ಭಾಷೆಯನ್ನು ಕಲಿಯುವುದು ಅವರವರ ವೈಯಕ್ತಿಕ ಜವಾಬ್ದಾರಿ, ವೈಯಕ್ತಿಕ ಸಮಸ್ಯೆ' ಎನ್ನುವುದು ಯುಕ್ತವಾದ ಹೇಳಿಕೆಯಾಗಿದೆ. ಕರ್ನಾಟಕದಾಚೆ ಹಾಗೂ ಭಾರತದಾಚೆ ಹೋಗಿ ವ್ಯವಹರಿಸಲು ಇಂಗ್ಲಿಷ್ ಅಗತ್ಯ – ಎಂಬ ನೆಪದಿಂದ ಇಂಗ್ಲಿಷನ್ನು ಪ್ರೋತ್ಸಾಹಿಸುವುದರ ಅನವಶ್ಯಕತೆಯನ್ನು ಈ ಹೇಳಿಕೆ ಸ್ಪಷ್ಟಪಡಿಸುತ್ತದೆ. ಹೊರಗಿನ ಪ್ರದೇಶಗಳೊಂದಿಗೆ ಸಂಪರ್ಕಕ್ಕೆ ಇಂಗ್ಲಿಷ್ ಅವಶ್ಯಕ – ಎನ್ನುವ ನೆಪದಿಂದ ಎಲ್ಲರಿಗೂ ಅದನ್ನು ಕಲಿಸಿದರೆ, ಹಾಗೆ ಕಲಿತದ್ದರಿಂದ ಆಗುವ ನಷ್ಟ – ಹೊರಜಗತ್ತಿಗೆ ಹೋಗಿ ಕೆಲಸ ಮಾಡುವವರು ತರಬಹುದಾದ ಲಾಭದೊಂದಿಗೆ ಹೋಲಿಸಿದರೆ – ತುಂಬಾ ಹೆಚ್ಚಿನದು ಎಂದು ಹೇಳಬಹುದು. ಈ ದೃಷ್ಟಿಯಲ್ಲಿ 'ಇಂಗ್ಲಿಷ್ ಕೆಲವರಿಗೆ ಮಾತ್ರ ಸಾಕು' – ಎನ್ನುವ ಮಾತನ್ನು ಒಪ್ಪಬಹುದಾದರೂ, ಪಾಶ್ಚಾತ್ಯ ವಿಜ್ಞಾನ, ತಂತ್ರಜ್ಞಾನ, ಸಾಹಿತ್ಯ – ಇತ್ಯಾದಿಗಳನ್ನು ಕಲಿಯುವುದಕ್ಕೂ, ಅವುಗಳನ್ನು ಕನ್ನಡದಲ್ಲಿ ತರುವುದಕ್ಕೂ ಇದರಿಂದ ತೊಂದರೆಯಿದೆ ಎನ್ನಬೇಕು.

ಆ) <u>ಕುವೆಂಪು</u>

''ಇಂಗ್ಲಿಷ್ ಭಾಷೆಯ ಯೋಗ್ಯತೆ, ಅದರ ವ್ಯಾಪ್ತಿ, ಅದರಿಂದೊದಗುವ ಪ್ರಜ್ಞಾವೈಶಾಲ್ಯ, ಅದು ನಮ್ಮಲ್ಲಿ ಪ್ರಚೋದಿಸಿರುವ ವಿಚಾರಬುದ್ಧಿ, ಅದರಿಂದ ಮುಂದೆ ಎಂದೆಂದಿಗೂ ನಮಗೆ ಲಭಿಸಲಿರುವ ಸಂಪರ್ಕ ಸಹಾಯ ಮೊದಲಾದವುಗಳನ್ನೆಲ್ಲ ಅರಿತವರಾರೂ ಬ್ರಿಟಿಷರನ್ನು ಓಡಿಸಿದಂತೆ ಇಂಗ್ಲಿಷ್ ಭಾಷೆಯನ್ನೂ ಓಡಿಸಬೇಕೆಂದು ಹೇಳುವ ಅವಿವೇಕಕ್ಕೆ ಬೀಳಲಾರರು. ಹಾಗೆ ಕರೆದವರನ್ನು ಪ್ರಚ್ಛನ್ನ ದೇಶದ್ರೋಹಿಗಳು ಎಂದು ಕರೆಯ

ಬೇಕಾಗುತ್ತದೆ.'' [43] — ಎಂದು ಸ್ಪಷ್ಟವಾಗಿಯೇ ಇಂಗ್ಲಿಷ್ ಭಾಷೆಯ ಅಗತ್ಯವನ್ನು ಸ್ಪಷ್ಟಪಡಿಸುವ ಕುವೆಂಪು ಅವರು, ಅದು ಕನ್ನಡದ ಮೇಲೆ ಉಂಟುಮಾಡುವ ಪರಿಣಾಮವನ್ನು ಗಮನಿಸಿ, ''ಇನ್ನುಮುಂದೆ ಇಂಗ್ಲಿಷ್ ಹಲವರು ಕಲಿಯುವ ಭಾಷೆಯಲ್ಲ; ಕೆಲವರು ಕಲಿಯಬೇಕಾದ ಭಾಷೆ.

ಇನ್ನುಮುಂದೆ ಅನೇಕರಿಗೆ ಬೇಕಾದ ಇಂಗ್ಲಿಷಿನ ಮಟ್ಟವೆಂದರೆ ಅದನ್ನೋದಿ ಅರ್ಥ ಮಾಡಿಕೊಳ್ಳುವುದಷ್ಟೇ ಹೊರತು ಅದರಲ್ಲಿ ಸಂಭಾಷಿಸುವುದಾಗಲಿ, ಭಾಷಣ ಮಾಡುವುದಾಗಲಿ, ಬರೆಯುವುದಾಗಲಿ ಅಲ್ಲ.'' [44]

— ಎನ್ನುತ್ತಾರೆ. ಇಂಗ್ಲಿಷ್, ಕನ್ನಡಕ್ಕೆ ನೀಡಬೇಕಾದ ಸ್ಥಾನಮಾನದ ಬಗ್ಗೆ, ''ಇಂಗ್ಲಿಷನ್ನು ಅದರ ಪ್ರಥಮ ಸ್ಥಾನದಿಂದ ಸದ್ಯಕ್ಕೆ ದ್ವಿತೀಯ ಸ್ಥಾನಕ್ಕೆ ಇಳಿಸಿ, ಕನ್ನಡವನ್ನು ಪ್ರಥಮ ಭಾಷಾಸ್ಥಾನಕ್ಕೆ ಏರಿಸಿ, ಪ್ರಥಮ ಭಾಷೆಯ ಮೂರು ಪ್ರಶ್ನೆ ಪತ್ರಿಕೆಗಳಲ್ಲಿ ಒಂದನ್ನು ಇಂಗ್ಲಿಷ್ ಸಾಹಿತ್ಯ ಎಂಬ ಹೆಸರಿನಲ್ಲಿ ಇಂಗ್ಲಿಷ್ ಸಾಹಿತ್ಯಕ್ಕೆ ಮೀಸಲಾಗಿರಿಸಿ, ಕನ್ನಡದಲ್ಲಿ ಪಾಠ ಹೇಳಿ, ಕನ್ನಡದಲ್ಲಿಯೇ ಉತ್ತರ ಬರೆಯುವಂತೆ ಮಾಡಿದರೆ, ನಮ್ಮ ಮಕ್ಕಳಿಗೆ ಇಂಗ್ಲಿಷ್ ಭಾಷೆಯ ಹೊರೆಯನ್ನು ತಪ್ಪಿಸುವುದರ ಜೊತೆಗೆ ಇಂಗ್ಲಿಷ್ ಸಾಹಿತ್ಯದ ರಸಾಮೃತವನ್ನು ಪಾನಮಾಡಿದಂತಾಗಿ, ಅವರ ಪುಷ್ಟಿ ಈಗಿರುವುದಕ್ಕಿಂತ ನೂರ್ಮಡಿ ಹೆಚ್ಚುವುದರಲ್ಲಿ ಸಂದೇಹವಿಲ್ಲ.'' [45] ಎನ್ನುತ್ತಾರೆ.

ಇಂಗ್ಲಿಷ್ ಉಚ್ಚಾರಣೆಯ ಬಗೆಗೆ, ''ಎಷ್ಟು ಸಾಧ್ಯವೊ ಅಷ್ಟರಮಟ್ಟಿಗೆ ಸ್ಪಷ್ಟವಾದ ಉಚ್ಚಾರಣೆಯನ್ನು ಕಲಿತರೆ ಸಾಕು.'' ಎನ್ನುತ್ತಾರೆ.[46]

ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಮಕ್ಕಳ ಮೇಲೆ ಇಂಗ್ಲಿಷ್ ಹೇರುವುದರಿಂದ, ಶಾಲೆ — ಕಾಲೇಜುಗಳಲ್ಲಿ ಇಂಗ್ಲಿಷ್ ಮಾಧ್ಯಮದಲ್ಲಿ ಬೋಧಿಸುವುದರಿಂದ ವಿದ್ಯಾರ್ಥಿಗಳಿಗೆ ವಿಷಯಗ್ರಹಣ ಸಾಧ್ಯವಾಗದೆ, ಸಂಶಯ ನಿವಾರಣೆಯೂ ಆಗದೆ, ಇಡೀ ಶಿಕ್ಷಣವೇ ವಿಫಲ ವಾಗುತ್ತದೆ — ಎನ್ನುತ್ತಾರೆ.[47]

ಕುವೆಂಪು ಅವರ ವಿಚಾರಗಳಲ್ಲಿ ಪ್ರಧಾನ ಅಂಶಗಳು ಎರಡು: 1) ಇಂಗ್ಲಿಷನ್ನು

ಎಲ್ಲರೂ ಕಲಿಯಬೇಕಾಗಿಲ್ಲ; ಅಖಿಲಭಾರತ – ಅಂತರರಾಷ್ಟ್ರೀಯ ರಂಗಕ್ಕೆ ಹೋಗುವವರಿಗೆ, ರಾಜಕೀಯ, ವೈಜ್ಞಾನಿಕ ಇತ್ಯಾದಿ ಶಾಲೆಗಳಿಗೆ ಪ್ರವೇಶಿಸುವವರಿಗೆ, ಕರ್ನಾಟಕದಲ್ಲಿಯೇ ಇದ್ದು ಜೀವನ ರೂಪಿಸಿಕೊಳ್ಳುವವರಿಗೆ – ಹೀಗೆ ಮೂರು ರೀತಿ ವಿದ್ಯಾರ್ಥಿಗಳನ್ನು ವಿಭಾಗ ಮಾಡಿಕೊಂಡು ಯಾರು ಯಾರಿಗೆ ಇಂಗ್ಲಿಷ್ ಬೇಕು – ಎಂದು ನಿಷ್ಕರ್ಷಿಸಬೇಕು.[48] 2) ಎಷ್ಟೆಷ್ಟು ಇಂಗ್ಲಿಷ್ ಬೇಕು ಎಂದು ನಿರ್ಣಯಿಸಬೇಕು. ಹಲವರಿಗೆ ಓದಿ ಅರ್ಥಮಾಡಿಕೊಳ್ಳುವಷ್ಟು ಇಂಗ್ಲಿಷ್ ಸಾಕು. ಕೆಲವರಿಗೆ ಮಾತ್ರ – ವೈಜ್ಞಾನಿಕ ಶಿಕ್ಷಣ ಪಡೆಯುವವರಿಗೆ, ರಾಜಕೀಯ ವ್ಯಕ್ತಿಗಳಿಗೆ – ಇಂಗ್ಲಿಷ್ ಚೆನ್ನಾಗಿಯೇ ಬೇಕು. ಇಲ್ಲಿ ಇಂಗ್ಲಿಷನ್ನು ಮಾತಾಡಲೂ ಬರೆಯಲೂ ಕಲಿಸಬೇಕು.

ಇಂಗ್ಲಿಷ್ ಭಾಷೆಯ ಕುರಿತ ಅತಿಯಾದ ವ್ಯಾಮೋಹವೂ ಅತಿಯಾದ ವಿರೋಧವೂ ಸರಿಯಲ್ಲವೆನ್ನುವ ಕುವೆಂಪು ಅವರು, ಇಂಗ್ಲಿಷ್ ಯಾರು ಯಾರಿಗೆ, ಎಷ್ಟೆಷ್ಟು – ಎಂದು ನೋಡಿಕೊಂಡು ಇಂಗ್ಲಿಷನ್ನು ಕಲಿಯಬೇಕೆನ್ನುವುದರಲ್ಲಿ ಮಧ್ಯಮ ಮಾರ್ಗವನ್ನೇ ಅನುಸರಿಸುತ್ತಾರೆ.[49] ಆದರೆ 'ಕೆಲವರು ಮಾತ್ರ ಕಲಿತರೆ ಸಾಕು' – ಎನ್ನುವಾಗ, ಆ ಕೆಲವರು ಯಾರು ಎಂದು ಕಂಡುಕೊಳ್ಳಲು ಯಾವ ಮಾನದಂಡವಿದೆ – ಎಂಬುದನ್ನು ಅವರು ಹೇಳುವುದಿಲ್ಲ. ಇಂದಿನ ಸ್ಪರ್ಧಾತ್ಮಕ ಬದುಕಿನಲ್ಲಿ ಎಲ್ಲರೂ ತಮ್ಮ ತಮ್ಮ ಮಕ್ಕಳು ಇಂಜಿನಿಯರ್, ವೈದ್ಯ – ಆಗುವುದನ್ನು ಬಯಸುತ್ತಾರೆ. ಆಗ ಸಹಜವಾಗಿಯೇ ಇಂಗ್ಲಿಷ್ ಶಿಕ್ಷಣ ಕೊಡಿಸುತ್ತಾರೆ. ಇದರಿಂದ, ಇಂಗ್ಲಿಷ್ ಕಲಿತು ಶ್ರೇಷ್ಠರಾದ ವ್ಯಕ್ತಿಗಳಿಗೆ ವಿಶೇಷ ಸೌಕರ್ಯಗಳೂ, ಸ್ಥಾನಮಾನಗಳೂ ಇರಬಾರದು ಎನ್ನಬೇಕಾಗುತ್ತದೆ. ಆದರೆ ವಿಜ್ಞಾನ, ರಾಜಕೀಯ, ರಾಷ್ಟ್ರೀಯ – ಅಂತರರಾಷ್ಟ್ರೀಯ ಸಂಪರ್ಕಕ್ಕೆ – ಇಂಗ್ಲಿಷ್ ಬಳಕೆಯಾಗುವವರೆಗೂ ಇಂಗ್ಲಿಷಿಗಿರುವ ವಿಶೇಷ ಸ್ಥಾನಮಾನ ತಪ್ಪುವುದಿಲ್ಲ. ಅದು ಇರುವಷ್ಟು ಕಾಲ ಅದನ್ನು ಉದ್ದೇಶವಾಗಿಟ್ಟುಕೊಂಡು ಇಂಗ್ಲಿಷ್ ಶಿಕ್ಷಣ ಕೊಡಿಸುವವರ ಸಂಖ್ಯೆಯೂ ಹೆಚ್ಚುತ್ತದೆ. ಇಂಗ್ಲಿಷ್ ಕೆಲವರಿಗೆ ಎಂದು ಹೇಳುವುದು ಕನ್ನಡದ ರಕ್ಷಣೆಗೆ ತುಂಬ ಉಪಯುಕ್ತವಾಗಬಹುದಾದರೂ, ಸಮಾನತೆಯ ನೆಲೆಯಲ್ಲಿ ಅದು ಅಸಾಧ್ಯವೆನಿಸುತ್ತದೆ. ಕುವೆಂಪು ಅವರ ಚಿಂತನೆಯಲ್ಲಿ ಇಂಗ್ಲಿಷ್ ಎಷ್ಟು ಬೇಕು – ಎಂಬ ವಿಚಾರ ಬಹಳ ವೈಜ್ಞಾನಿಕವಾದುದಾಗಿದೆ. ಒಂದೊಂದು ರೀತಿಯಲ್ಲಿ ಜೀವನವನ್ನು ರೂಪಿಸಿಕೊಂಡವರು ಅಗತ್ಯಕ್ಕನುಗುಣವಾಗಿ ಇಂಗ್ಲಿಷನ್ನು ಓದಿ ಅರ್ಥಮಾಡಿಕೊಳ್ಳಲೂ, ಬರೆಯಲೂ, ಮಾತಾಡಲೂ ಎಷ್ಟೆಷ್ಟು ಬೇಕೋ ಅಷ್ಟು ರೂಢಿಸಿಕೊಂಡರೆ ಸಾಕು ಎಂಬುದು ಅವರವರ

ಯುಕ್ತಿಕರ್ತ್ಯ, ಇಂಗ್ಲಿಷನ್ನು ಅವಲಂಬಿಸುವ ಇತಿಮಿತಿಗಳೂ ಯೋಗ್ಯ ಸಂಧಾನವನ್ನು ಏರ್ಪಡಿಸುತ್ತದೆ.

## ಇ) ಪು.ತಿ. ನರಸಿಂಹಾಚಾರ್

ಉಳಿದ ಭಾಷೆಗಳಂತೆ ಇಂಗ್ಲಿಷನ್ನು ಗೆಲ್ಲುವುದು ಕನ್ನಡಕ್ಕೆ ಕಷ್ಟವೆನಿಸಿದೆ — ಎಂದು ಪು.ತಿ.ನ. ಅವರು ಹೇಳುತ್ತಾರೆ.[50] ಇದಕ್ಕೆ ಕಾರಣ, '' ನಮ್ಮ ವಿದ್ಯಾವಂತರ ಎಲ್ಲ ಬೌದ್ಧಿಕ ಹಾಗೂ ಐಹಿಕ ಚಪಲಗಳನ್ನೂ ಇಂಗ್ಲಿಷ್ ಭಾಷೆ ತೀರಿಸಿಬಿಡುತ್ತದೆ. ಕನ್ನಡಕ್ಕೆ ಇನ್ನೂ ಆ ಸಾಮರ್ಥ್ಯ ಬಂದಿಲ್ಲ.''[51] ಆಡಳಿತದಲ್ಲಿ ಇಂಗ್ಲೀಷೇ ಇರುವುದರಿಂದ ಇದು ಸಾಧ್ಯವಾಗುವುದಿಲ್ಲ; ಆದರೆ, '' ನಾವೊಂದು ಪ್ರಬುದ್ಧವೂ ಸ್ವತಂತ್ರವೂ ಆದ ಜನಾಂಗವಾಗಬೇಕಾದರೆ ಇಂಗ್ಲಿಷನ್ನು ತೊಟ್ಟಿಲಿನಿಂದ ಚಟ್ಟದವರೆಗೂ ಕಲಿತು ಬಳಸುತ್ತಾ ಹೋಗುವುದು ಬಹಳ ಹೇಯಕರವಾದ ಸಂಗತಿಯಾಗುತ್ತದೆ.''

ಇಂಗ್ಲಿಷ್ — ಕನ್ನಡ ಸಂಬಂಧ ಹೇಗಿರಬೇಕು ಎನ್ನುವ ವಿಷಯದಲ್ಲಿ, '' ಆರು ತಿಂಗಳಲ್ಲಿ ಕಲಿತು ಬಳಸಬಹುದಾದ ಒಂದು ಭಾಷೆಗಾಗಿ ಇಷ್ಟು ಶ್ರಮವೇಕೆ? ನಮ್ಮ ಮಕ್ಕಳ ಮೇಲೆ ಈ ಹೊರಲಾರದ ಹೊರೆಯನ್ನು ಹೊರಿಸಬೇಕೆ? .... ಜ್ಞಾನಕ್ಕಾಗಿಯೂ ಅನ್ಯದೇಶಗಳೊಡನೆ ವ್ಯವಹಾರಕ್ಕಾಗಿಯೂ ಇಂಗ್ಲಿಷರೂ ಫ್ರೆಂಚರೂ ಜರ್ಮನರೂ ರಷ್ಯನ್ನರೂ ಅನ್ಯಭಾಷೆಗಳನ್ನು ಕಲಿಯುವಂತೆ ನಮ್ಮಲ್ಲಿನ ಒಂದು ಹಿಡಿ ಪ್ರೌಢರು ಕಲಿಯಲಿ. ಕಲಿತು ಅದರ ಸಾರವನ್ನು ನಮ್ಮ ಭಾಷೆಗೆ ಎರೆಯಲಿ. ಇದು ಯೋಗ್ಯವಾದ ಕೆಲಸ.''[52] ಎನ್ನುತ್ತಾರೆ.

ಇಂಗ್ಲಿಷನ ಪ್ರಭಾವವನ್ನು ತಗ್ಗಿಸಲು ಹಿಂದಿಯೊಡನೆ ಸ್ನೇಹ ಮಾಡಿಕೊಳ್ಳಬೇಕು — ಎಂದು ಪು.ತಿ.ನ. ಅಭಿಪ್ರಾಯಪಡುತ್ತಾರೆ. ಆದರೆ ಹಿಂದಿಯನ್ನು ಹೇರುವ ಅಪಾಯವನ್ನು ಅವರು ಮನಗಾಣುತ್ತಾರೆ.[53]

ಪು.ತಿ.ನ. ಅವರ ಪ್ರಕಾರ, ಇಂಗ್ಲಿಷ್ ಕನ್ನಡದ ಬೆಳವಣಿಗೆಗೆ ದೊಡ್ಡ ಶತ್ರುವಾಗಿದೆ.[54] ಅದನ್ನು ನಮ್ಮ ದೇಶದಿಂದ ಹೊರದೂಡುವ ಅಥವಾ ವಿಶ್ವವಿದ್ಯಾಲಯ ಹಾಗೂ ಸರಕಾರ ಕಾರ್ಯಸಾಧ್ಯದ ಕೆಲವು ಕೋಣೆಗಳಿಗೆ ಸೀಮಿತಗೊಳಿಸುವುದು ಅಗತ್ಯ.[55]

ಮುಖ್ಯವಾಗಿ, ಜ್ಞಾನ ಹಾಗೂ ಅಂತರರಾಷ್ಟ್ರೀಯ ವ್ಯವಹಾರಗಳಿಗೆ ಇಂಗ್ಲಿಷ್ ಕಲಿಯುವುದನ್ನು ಕೆಲವರಿಗೆ ಮಾತ್ರ ಸೀಮಿತಗೊಳಿಸಬೇಕು; ಹಾಗಿಲ್ಲದಿದ್ದರೆ ಅದರ ವ್ಯಾಮೋಹ ಜನರಲ್ಲಿ ಹಬ್ಬುವುದೆಂದು ಪು.ತಿ.ನ. ಅವರ ಒಟ್ಟು ಅಭಿಪ್ರಾಯ. ಹೀಗಾದರೆ ನಮ್ಮ ನಾಡಿನ, ನಮ್ಮ ದೇಶದ ಜ್ಞಾನಾಭಿವೃದ್ಧಿ ಹಾಗೂ ಜಾಗತಿಕ ಮಟ್ಟದಲ್ಲಿ ದೇಶದ ಬೆಳವಣಿಗೆ ಸಾಧ್ಯವೇ — ಎಂಬ ಪ್ರಶ್ನೆ ಏಳುತ್ತದೆ. ಇಂಗ್ಲಿಷ್ ಏಕಾಗಿ ಕಲಿಯಬೇಕೆನ್ನುವವರ ಚಿಂತನೆಗಳೊಂದಿಗೆ ಹೋಲಿಸುವಾಗ, ಪು.ತಿ.ನ. ಅವರ ಚಿಂತನೆಗಳು ಕನ್ನಡ ಭಾಷಾ ಕೇಂದ್ರಿತವಾಗಿದೆ ಮತ್ತು ಭಾರತದೊಂದಿಗೆ ಇಡಿಯಾಗಿ ಕರ್ನಾಟಕವನ್ನು ಗುರುತಿಸಿಕೊಂಡಿದೆ. ಕನ್ನಡ ಭಾಷೆಯ ಬೆಳವಣಿಗೆಗೆ ಅನ್ಯಜ್ಞಾನಭಾಷೆಯ ಸಂಘರ್ಷ ಅತ್ಯಗತ್ಯವೆಂಬುದು ಇಲ್ಲಿ ಪ್ರಮುಖ ಸಂಗತಿಯಾಗಿಲ್ಲ.

ಈ) <u>ಹಾ.ಮಾ. ನಾಯಕ</u>

ಇಂಗ್ಲಿಷ್ ಭಾಷೆ ಆಡಳಿತ, ಶಿಕ್ಷಣ, ಸಮೂಹಮಾಧ್ಯಮದಲ್ಲಿ ಹಾಗೂ ಜನರ ಆಡುಮಾತಿನಲ್ಲಿ ಪ್ರಭುತ್ವ ನಡೆಸುವುದರಿಂದ ಕನ್ನಡ ಭಾಷೆಯ ಮೇಲಾಗುತ್ತಿರುವ ದುಷ್ಪರಿಣಾಮವನ್ನು ಗಮನಿಸಿ, ಇಂಗ್ಲಿಷಿನ ಹಿಡಿತದಿಂದ ಕನ್ನಡವನ್ನು ಉಳಿಸುವ ವಿಷಯಕ್ಕೆ ಹಾ.ಮಾ. ನಾಯಕರು ಪ್ರಾಧಾನ್ಯತೆಯನ್ನು ನೀಡುತ್ತಾರೆ. ಇಂಗ್ಲಿಷ್ ಭಾಷೆ ಶಿಕ್ಷಣಮಾಧ್ಯಮವಾಗುವುದರಿಂದ ಉಂಟಾಗುವ ಅಪಾಯವನ್ನೂ, ಕನ್ನಡ–ಇಂಗ್ಲಿಷ್ ಭಾಷೆಯ ನಡುವೆ ಇರಬೇಕಾದ ವಿವೇಕಯುತ ಸಂಬಂಧವನ್ನೂ ಕುರಿತು ಅವರು ಹೇಳುತ್ತಾರೆ.

“ಇಂಗ್ಲಿಷ್ ನಮಗೆ ಪ್ರಪಂಚಕ್ಕಿರುವ ಕಿಟಕಿ ಎಂಬುದರಲ್ಲಿ ಸಂದೇಹವಿಲ್ಲ. ಹಾಗೆಂದು ಅದನ್ನು ತಲೆಯ ಮೇಲೆ ಹೇರಿಕೊಳ್ಳಲಾಗುವುದಿಲ್ಲ. ಇಂಗ್ಲಿಷಿನ ದುರ್ದೈವವೆಂದರೆ ಅದರ ನಿಜವಾದ ಸಾರ್ಥಕವಾದ ಬಳಕೆಯಾಗದೆ ಕೇವಲ ಒಂದು ಪ್ರತಿಷ್ಠೆಯ ವಿಷಯವಾಗಿರುವುದು. ಕಾನ್ವೆಂಟುಗಳ ಶಿಕ್ಷಣದಲ್ಲಿ ಅದು ಗಿಳಿಪಾಠವಾಗಿ ನಮ್ಮ ಬಾಲಕ ಬಾಲಕಿಯರಲ್ಲಿ ಒಂದು ಕೃತಕ ವ್ಯಕ್ತಿತ್ವವನ್ನು ಮೂಡಿಸುತ್ತದೆ. ಈ ಬಗೆಯ ಶಿಕ್ಷಣವೇ ಪರಮಶ್ರೇಷ್ಠವಾದುದೆಂದು ನಮ್ಮಲ್ಲಿ ಅನೇಕರು ಭ್ರಮಿಸಿದ್ದಾರೆ. ಇಂಗ್ಲಿಷ್ ನಮಗೆ ಬೇಕು, ನಿಜ. ಆದರೆ ಎಷ್ಟು ಬೇಕು, ಹೇಗೆ ಬೇಕು ಎನ್ನುವುದನ್ನು ಮಾತ್ರ ಯಾರೂ ಯೋಚಿಸಿಲ್ಲ. ನಮ್ಮ ಶಿಕ್ಷಣ ವ್ಯವಸ್ಥೆ ಸಿದ್ಧಾಂತವನ್ನು ಅವಲಂಬಿಸಿದ್ದು, ವಾಸ್ತವಿಕತೆಯನ್ನು ಆಧರಿಸಿದ್ದಲ್ಲ. ಇಂಗ್ಲಿಷಿಗಾಗಿ ಕೋಟಿ ಕೋಟಿ ರೂಪಾಯಿಗಳನ್ನು ಸರ್ಕಾರ [illegible] ಯೋಜನೆಗಳಲ್ಲಿ ವ್ಯಯ ಮಾಡಿದ್ದರೂ ಅದು ಜನರ ಹಿತ

ಬರಲು ಸಾಧ್ಯವಾಗಿಲ್ಲ. ಅದು ಜನಭಾಷೆಯಲ್ಲಿ ಶಾಲಾ ಶಿಕ್ಷಣದ ಕೊನೆಯಲ್ಲಿ ಎಷ್ಟೊಂದು ಜನ ಶಿಕ್ಷಣವನ್ನು ಮುಂದುವರಿಸದೆ ಹೋಗುತ್ತಾರೆಂಬುದನ್ನು ಗಮನಿಸಿದರೆ ಇಂಗ್ಲಿಷ್ ಶಿಕ್ಷಣ ಅಪವ್ಯಯ ನಮಗೆ ತಿಳಿಯುತ್ತದೆ. ಕಲಿಸುವ ಇಂಗ್ಲಿಷನ್ನು ಕೇವಲ ಭಾಷೆಯನ್ನಾಗಿ ಚೆನ್ನಾಗಿ ಕಲಿಯಬೇಕು''

''ಇಂಗ್ಲಿಷನ್ನು ಭಾಷೆಯನ್ನಾಗಿ ಕಲಿಸಿ, ವಿಷಯಗಳನ್ನು ನಮ್ಮ ನಮ್ಮ ಭಾಷೆಗಳಲ್ಲಿಯೇ ಕಲಿಸಬೇಕು. ಮಾಧ್ಯಮದ ಪ್ರಶ್ನೆ ನಮ್ಮಲ್ಲಿ ಬಗೆಹರಿಯಲಾರದ ಸಮಸ್ಯೆಯಾಗಿದೆ. ಶಿಕ್ಷಣತಜ್ಞರೆನಿಸಿಕೊಂಡವರಿಗೂ ಅನೇಕ ಸಲ ಭಾಷೆಯನ್ನು ಕಲಿಸುವುದು, ಭಾಷೆಯ ಮೂಲಕ ಕಲಿಸುವುದು ಇವುಗಳ ನಡುವಿನ ಅಂತರ ತಿಳಿದಿರುವುದಿಲ್ಲ. ಕನ್ನಡ ಮಾಧ್ಯಮವಾಗಬೇಕು ಎಂದರೆ ಇಂಗ್ಲಿಷನ್ನು ಕಲಿಸಬಾರದು ಎಂದಲ್ಲ. ನಮ್ಮ ಭಾಷೆಯಲ್ಲಿ ಓದಿದ್ದೇ ಮೈಗೆ ಹತ್ತುವುದು. ಆಧುನಿಕ ವಿಜ್ಞಾನವನ್ನು ಕಲಿಯುವುದು ಕಲಿಸುವುದು ನಮ್ಮ ಭಾಷೆಗಳ ಮೂಲಕ ಸಾಧ್ಯವಾಗುವುದಿಲ್ಲ ಎನ್ನುವುದು ಒಂದು ಮೂಢ ನಂಬಿಕೆ. ಕನ್ನಡದ ಮೂಲಕ ಕಲಿತೂ ಶ್ರೇಷ್ಠ ವಿಜ್ಞಾನಿಯಾಗಬಹುದು ಎನ್ನುವುದಕ್ಕೆ ನಮ್ಮವರೇ ಆದ ಡಾ. ಸಿ.ಎನ್.ಆರ್. ರಾವ್ ಅತ್ಯುತ್ತಮ ಉದಾಹರಣೆಯಾಗಿದ್ದಾರೆ. ಉನ್ನತ ಶಿಕ್ಷಣವನ್ನು ಕನ್ನಡದ ಮೂಲಕ ಕಲಿಯುವುದು ಸಾಧ್ಯವಿಲ್ಲವೆಂದು ಕನ್ನಡಕ್ಕೆ ಹೋರಾಡುವವರೂ ಆಗಾಗ ಹೇಳುವುದನ್ನು ಕೇಳಿ ನನಗೆ ಆಶ್ಚರ್ಯವೆನಿಸಿದೆ. ಜನರಿಗೆ ಇಂಗ್ಲಿಷಿನ ಮೇಲೆ ಮೋಹ ಬೆಳೆಯಲು ಪ್ರತಿಷ್ಠೆಯೇ ಕಾರಣ.''[56]

ನಮ್ಮ ಭಾಷೆ ಮತ್ತು ನಮ್ಮದಲ್ಲದ ಭಾಷೆ — ಇವುಗಳ ಸ್ಥಾನಮಾನ ಯಾವುದು, ಅವುಗಳು ಎಷ್ಟರಮಟ್ಟಿಗೆ ಬೇಕು ಎಂಬುದನ್ನು ಹಾ.ಮಾ.ನಾಯಕರು ಸ್ಪಷ್ಟಪಡಿಸುತ್ತಾರೆ. ''ಇಂಗ್ಲಿಷ್ ನಮಗೆ ಬೇಕು. ಆದರೆ ನಮ್ಮ ಭಾಷೆಯ ಬದಲಿಗೆ ಅಲ್ಲ. ಇಂಗ್ಲಿಷ್ ಒಂದೇ ಅಲ್ಲ, ಇನ್ನೂ ಹಲವು ಭಾಷೆಗಳು ನಮಗೆ ಬೇಕು. ಒಂದೊಂದು ಭಾಷೆಯೂ ಒಂದೊಂದು ವರ; ಒಂದೊಂದು ಜಗತ್ತು. ಆದರೆ ಯಾವ ಭಾಷೆ ಬೇಕು ಎನ್ನುವುದು ಅಗತ್ಯವನ್ನು ಅನುಸರಿಸಿದ್ದು, ಆಯ್ಕೆಯನ್ನು ಅವಲಂಬಿಸಿದ್ದು. ಹೊರಜಗತ್ತಿನ ಸಂಪರ್ಕಕ್ಕಾಗಿ ನಮಗೆ ಇಂಗ್ಲಿಷ್ ಬೇಕು. ಆದರೆ ಅದೇ ಸರ್ವಸ್ವವಾಗಿ ಅಲ್ಲ.''[57]

ಇಂಗ್ಲಿಷಿನಿಂದಾಗುವ ಅನುಕೂಲತೆಗಳ, ಜ್ಞಾನಾಭಿವೃದ್ಧಿಯ ಅರಿವಿದ್ದರೂ, ಇಂಗ್ಲಿಷ್

ನಿಂದ ಕನ್ನಡಕ್ಕಾಗುವ ಅಪಾಯದ ಪ್ರಮಾಣ ಹೆಚ್ಚಾಗಿರುವುದರಿಂದ, ಮೊದಲು ಅದನ್ನು ತಪ್ಪಿಸಬೇಕೆನ್ನುವುದು ಹಾ.ಮಾ.ನಾ. ಅವರ ಚಿಂತನೆಯಲ್ಲಿ ವ್ಯಕ್ತವಾಗುತ್ತದೆ. ಇಂಗ್ಲಿಷಿನ ದಾಳಿಯನ್ನು ಮೊದಲು ಎದುರಿಸಬೇಕು; ಆದರೆ ಮಾತ್ರ ಕನ್ನಡ ಬದುಕೀತು, ಬೆಳೆದೀತು — ಎಂಬ ಚಿಂತನೆಯಲ್ಲಿ ಅಭಿವೃದ್ಧಿಯ ಕಡೆಗೆ ಇರುವ ದೃಷ್ಟಿಗಿಂತ, ಅಪಾಯದ ಎಚ್ಚರ ಹೆಚ್ಚಾಗಿ ಕಾಣಿಸುತ್ತದೆ.

ಇಂಗ್ಲಿಷ್ ವ್ಯಾಮೋಹವನ್ನು ಮತ್ತು ಅದರ ಹಿಡಿತವನ್ನು ತಡೆಗಟ್ಟಲು 1) ಆಡಳಿತ, ಶಿಕ್ಷಣ, ಸಮೂಹಮಾಧ್ಯಮಗಳು — ಎಲ್ಲವುಗಳೂ ಕನ್ನಡ ಮಾಧ್ಯಮದಲ್ಲಿರಬೇಕು. 2) ಇಂಗ್ಲಿಷಿನಿಂದ ಬರುವ ಜ್ಞಾನ, ಹೊರಜಗತ್ತಿನ ಸಂಪರ್ಕ — ಇವುಗಳಿಂದಾಗಿ ಜನತೆಯೆಲ್ಲ ಅದನ್ನು ಕಲಿಯಬೇಕಾಗಿಲ್ಲ. ಕೆಲವರು ಮಾತ್ರ ಅದನ್ನು ಕಲಿತರೆ ಸಾಕು. 3)ಇಂಗ್ಲಿಷ್ ಭಾಷೆಯನ್ನು ಕಲಿಯುವುದು ಬೇರೆ, ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುವುದು ಬೇರೆ. ಕೆಲವರು ಮಾತ್ರ ಇಂಗ್ಲಿಷನ್ನು ಚೆನ್ನಾಗಿ ಕಲಿತರೆ ಸಾಕು; ಹಲವರು ಅರ್ಥಮಾಡಿಕೊಳ್ಳುವಷ್ಟರ ಮಟ್ಟಿಗೆ ಕಲಿತರೆ ಸಾಕು — ಈ ಅಭಿಪ್ರಾಯ ಇನ್ನೂ ಕೆಲವು ಮಂದಿ ಚಿಂತಕರಲ್ಲಿ ಪ್ರಧಾನವಾಗಿ ಕಾಣಿಸುತ್ತದೆ. ಮುಖ್ಯವಾಗಿ, ಚಿದಾನಂದಮೂರ್ತಿ, ಸಿ.ಪಿ.ಕೆ., ಎಚ್ಚೆಸ್ಕೆ — ಇವರಲ್ಲಿ ಕಾಣಿಸುತ್ತದೆ.

ಈ ಚಿಂತನೆಗಳಲ್ಲಿ ಕೆಲವು ವಿಷಯಗಳನ್ನು ಈಗ ಗುರುತಿಸಬಹುದು: 1) ಕನ್ನಡಕ್ಕೆ ನ್ಯಾಯವಾದ ಸ್ಥಾನವನ್ನು ದೊರಕಿಸುವ ಪ್ರಯತ್ನದಲ್ಲಿ ಇಂಗ್ಲಿಷ್ ಬಗೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದು. ಇಂಗ್ಲಿಷ್ ಈಗಾಗಲೇ ಸಾಕಷ್ಟು ನಮ್ಮಲ್ಲಿ ಬಂದಿದೆ; ಹೀಗಾಗಿ ಅದರಿಂದ ಹಾನಿಯಾಗುತ್ತದೆ — ಎಂಬ ಕಾರಣಕ್ಕಾಗಿ ಕನ್ನಡಕ್ಕೆ ಪ್ರಾಮುಖ್ಯತೆ ನೀಡುವ ಬದಲು, ಇಂಗ್ಲಿಷ್ ಕುರಿತ ವ್ಯಾಮೋಹವೂ, ಭ್ರಾಂತಿಯೂ ತಪ್ಪು ಶಿಕ್ಷಣ ಪದ್ಧತಿಯೂ, ವಿದ್ಯಾರ್ಥಿಗಳು ಇಂಗ್ಲಿಷ್, ಕನ್ನಡ — ಎರಡನ್ನೂ ಅಪೂರ್ಣವಾಗಿ ಕಲಿಯಲು ಹಾಗೂ ಅವರು ಶಿಕ್ಷಣದಿಂದ ವಿಮುಖರಾಗಲು ಕಾರಣವಾಗುತ್ತದೆ. ಆದ್ದರಿಂದ ಇಂಗ್ಲಿಷನ್ನು ಚೆನ್ನಾಗಿ ಕಲಿಯುವುದು ಸಾಧ್ಯವಾಗುವುದಿಲ್ಲ. ಇಂಗ್ಲಿಷನ್ನು ಕಲಿಸಬೇಕು; ಆದರೆ ಚೆನ್ನಾಗಿಯೇ ಕಲಿಸಬೇಕು — ಎಂದಿರುವುದು ಈ ಅರ್ಥದಲ್ಲಿ. ಹಾಗಾಗಿ ಇಲ್ಲಿ ಇಂಗ್ಲಿಷ್ ನಿರಾಕರಣೆಯಿಲ್ಲ; ಬದಲಾಗಿ ಆರೋಗ್ಯಕರವಾಗಿ ಇಂಗ್ಲಿಷ್ ಕಲಿಸಬೇಕಾದ ಅಗತ್ಯವನ್ನು ಹೇಳಿದೆ.

2) ಕೆಲವರಿಗೆ ಮಾತ್ರ ಇಂಗ್ಲಿಷ್ ಸಾಕು — ಎಂದರೆ, ಇಂಗ್ಲಿಷ್ ಕಡ್ಡಾಯವಾಗಿ ಎಲ್ಲರಿಗೂ ಬೇಕಾಗಿಲ್ಲ; ಅಗತ್ಯವಿರುವವರು ಮಾತ್ರ ಕಲಿತರೆ ಸಾಕು — ಎಂದು. ಆದರೆ, ಕನ್ನಡ ಬೆಳೆಯುವವರಿಗೆ ಇಂಗ್ಲಿಷನ್ನೇ ವಿವಿಧ ವಿಜ್ಞಾನ ಶಿಕ್ಷಣಗಳಿಗಾಗಿ ಅವಲಂಬಿಸಬೇಕಾಗಿರುವುದರಿಂದ ಇಂಗ್ಲಿಷನ್ನು ಎಲ್ಲರೂ ತಕ್ಕಮಟ್ಟಿಗೆ ಕಲಿಯುವುದು ಅನಿವಾರ್ಯವಾಗಿದೆ — ಎಂಬ ವಿಚಾರವನ್ನು ಸುಲಭವಾಗಿ ತಳ್ಳಿಹಾಕಲು ಸಾಧ್ಯವಿಲ್ಲ. ಇಂಗ್ಲಿಷ್ ಮಾಧ್ಯಮವಾಗಿ ಬೇಡ, ಪ್ರಾಥಮಿಕ ಹಂತದಿಂದಲೇ ಬೇಡ — ಎಂದು ಹೇಳುವುದು ಸೂಕ್ತವೇ ಹೊರತು, ಇಂಗ್ಲಿಷ್ ಕೆಲವರಿಗೆ ಮಾತ್ರವೇ ಸಾಕು ಎನ್ನುವುದು ಅಷ್ಟೊಂದು ಸರಿಯೆನಿಸುವುದಿಲ್ಲ.

3) ಇಂಗ್ಲಿಷ್ ಹಿಡಿತವನ್ನು ಕೊನೆಗೊಳಿಸುವಲ್ಲಿ ಆಡಳಿತ, ಶಿಕ್ಷಣ, ಸಮೂಹ ಮಾಧ್ಯಮಗಳು ಕನ್ನಡವನ್ನು ಜಾರಿಗೆ ತರಬೇಕೆಂದು ಹೇಳುವಾಗ, ಕನ್ನಡವನ್ನು ಉಳಿಸಲು, ಇಂಗ್ಲಿಷ್ ವ್ಯಾಮೋಹವನ್ನು ಬಿಡಲು ಪ್ರತಿಯೊಬ್ಬ ವ್ಯಕ್ತಿಗೂ ಇರುವ ಕರ್ತವ್ಯವನ್ನು ಮರೆಯುವಂತಿಲ್ಲ. ಕನ್ನಡವನ್ನು ಬೆಳೆಸುವ, ಸಮೃದ್ಧಗೊಳಿಸುವ ವ್ಯಕ್ತಿಗಳ ನಿರ್ಮಾಣದಲ್ಲಿ ಕನ್ನಡ ಮಾಧ್ಯಮ ಶಿಕ್ಷಣದ ಅಗತ್ಯವನ್ನು ಉಳಿದೆಲ್ಲ ವಿಷಯಕ್ಕಿಂತ ಹೆಚ್ಚು ಪ್ರಮುಖವಾಗಿ ಈ ಚಿಂತನೆ ಗಮನಿಸುತ್ತದೆ.

## 2. ಕನ್ನಡ, ಇಂಗ್ಲಿಷ್ ಎರಡೂ ಅತ್ಯಗತ್ಯ — ಎನ್ನುವವರು

ಕನ್ನಡದ ಅಭಿಮಾನದಿಂದ ಇಂಗ್ಲಿಷಿನ ಮೂಲಕ ದೊರಕುವ ಜ್ಞಾನ, ವಿಜ್ಞಾನಗಳನ್ನೂ, ಜಾಗತಿಕ ಅರಿವನ್ನೂ ಕಡೆಗಣಿಸಬಾರದೆಂದೂ, ಆಧುನಿಕ ಜಗತ್ತಿನಲ್ಲಿ ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಕಲಿಯುವುದರಿಂದ ಮಾತ್ರ ನಮ್ಮ ನಾಡು, ಭಾಷೆ ಅಭಿವೃದ್ಧಿ ಹೊಂದಬಲ್ಲದೆಂದೂ, ಆದ್ದರಿಂದ ಕನ್ನಡದ ಬೆಳವಣಿಗೆಗೆ ಇಂಗ್ಲಿಷನ್ನು ಚೆನ್ನಾಗಿಯೇ ಕಲಿಯಬೇಕು. ಆದಷ್ಟು ಮಂದಿಯೂ ಕಲಿಯಬೇಕು — ಎಂದು ಕೆಲವರು ಮಂದಿ ಚಿಂತಕರು ಕನ್ನಡ, ಇಂಗ್ಲಿಷ್ ಇವೆರಡಕ್ಕೂ ಅತಿಹೆಚ್ಚು ಪ್ರಾಧಾನ್ಯವನ್ನು ಕೊಡುತ್ತಾರೆ. ಇಲ್ಲಿ ಯಾವುದೇ ಒಂದು ಭಾಷೆ ಹೆಚ್ಚು ಪ್ರಧಾನ, ಇನ್ನೊಂದು ಅಷ್ಟು ಪ್ರಧಾನವಲ್ಲ — ಎಂದಿಲ್ಲ. ಎರಡೂ ಅನಿವಾರ್ಯವಾಗಿ ಪ್ರಧಾನ. ಕನ್ನಡ ಪ್ರಧಾನವಾಗಲು ಕಾರಣ, ಅದು ಕರ್ನಾಟಕದ ಜನ ಜೀವನವನ್ನು ಬೆಳೆಸಲು, ಸಮೃದ್ಧ ಬದುಕನ್ನು ಕಾಣಲು ಇದ್ದೇ ತೀರಬೇಕಾದ ಭಾಷೆ; ಕನ್ನಡಿಗರು ಬೆಳೆಯುವುದೂ ಈ ಭಾಷೆಯಲ್ಲಿಯೇ. ಇಂಗ್ಲಿಷ್ ಭಾಷೆ ಪ್ರಧಾನವಾಗಲು

ಕಾರಣ — ಅದು ವಿಜ್ಞಾನ, ತಂತ್ರಜ್ಞಾನ, ಸಾಹಿತ್ಯ — ಇತ್ಯಾದಿಗಳಿಂದಲೂ, ಜಾಗತಿಕವಾಗಿ ಸಂಪರ್ಕ ಭಾಷೆಯಾಗಿರುವುದರಿಂದಲೂ, ಕರ್ನಾಟಕದ ಹೊರಗಡೆ ಅದನ್ನು ಬಳಸುವ ಅವಶ್ಯಕತೆಯಿರುವುದರಿಂದಲೂ, ಅದನ್ನು ಬಿಟ್ಟರೆ ಹಾನಿಯೇ ಹೆಚ್ಚು — ಎಂಬುದು. ಈ ರೀತಿ ಚಿಂತಿಸುವ ಬಹಳ ಮಂದಿ ಇಂಗ್ಲಿಷನ್ನು ಚೆನ್ನಾಗಿ ಕರಗತ ಮಾಡಿಕೊಂಡು ಅದರ ಆಳ — ವಿಸ್ತಾರವನ್ನು ಅರಿತುಕೊಂಡವರು — ಎಂಬುದು ಮುಖ್ಯ. ಪ್ರಮುಖವಾಗಿ ವಿ.ಸೀ., ಎ.ಎನ್.ಮೂರ್ತಿರಾವ್, ಶಿವರಾಮ ಕಾರಂತ, ಗೋಪಾಲಕೃಷ್ಣ ಅಡಿಗ, ಯು.ಆರ್.ಅನಂತಮೂರ್ತಿ — ಇವರು ಈ ಬಗೆಯಲ್ಲಿ ಚಿಂತಿಸುತ್ತಾರೆ.

ಅ) <u>ವಿ. ಸೀತಾರಾಮಯ್ಯ</u>:

ವಿ.ಸೀ. ಯವರ ಪ್ರಕಾರ ಇಂಗ್ಲಿಷ್ ಕೆಲವರಿಗೆ ಸಾಲದು; ಅದನ್ನು ಕಲಿಯುವವರು ಹೆಚ್ಚಾಗಬೇಕು. ಆದರೆ ಕನ್ನಡಕ್ಕೇ ಪ್ರಾಧಾನ್ಯ; ಕನ್ನಡವನ್ನು ಬೆಳೆಸಲು ಇಂಗ್ಲಿಷ್ ಕಲಿಯುವುದು ಅತ್ಯಗತ್ಯ. ಇಂಗ್ಲಿಷ್ ಕೆಲವರಿಗೆ ಮಾತ್ರ ಸಾಕು — ಎಂಬ ವಾದದ ಬಗ್ಗೆ ಅವರು ಹೀಗೆ ಚರ್ಚಿಸುತ್ತಾರೆ:

''ಇಂಗ್ಲಿಷ್ ಕಲಿಯಲು ಎಷ್ಟು ಜನವೆಂದರೆ ಅಷ್ಟು ಜನ ಇನ್ನೂ ಬಹುಕಾಲ ಸಿದ್ಧರಾಗಿರಬೇಕು. ಕೆಲವರು ಮಾತ್ರ ಅದನ್ನು ಅತಿಶಯವಾಗಿ ಕಲಿತರೆ ಸಾಕು, ಕಲಿತುದನ್ನು ದೇಶಭಾಷೆಗೂ ತರಲಿ, ಎಲ್ಲ ವಿದ್ಯಾರ್ಥಿಗಳಿಗೂ ಇಂಗ್ಲಿಷ್ ಕಡ್ಡಾಯವಾಗಿ ಏಕೆ? ಎಂಬ ವಾದವಿದೆ. ಎಲ್ಲಿಯವರೆಗೆ ಪ್ರಾಂತಭಾಷೆಗಳು ಇರುವವೋ ಅವುಗಳಲ್ಲಿ ಸಾಹಿತ್ಯ ನಿರ್ಮಾಣವಾಗುವುದೋ, ಒಳಗೆಲಸಗಳಿಗೆಲ್ಲ ಅವನ್ನು ಬಳಸುವ ನಿರ್ಣಯ ನಡೆಯುವುದೋ, ಆ ಮೂಲಕ ವಿದ್ಯಾಪ್ರಚಾರ ನಡೆಯಬೇಕೋ ಅಲ್ಲಿಯವರೆಗೂ ಅವನ್ನು ಪೋಷಿಸಬೇಕು. ಬಳಸುವವರೂ ಬೆಳೆಸುವವರೂ ಯಾರು? ಆಯಾ ಪ್ರದೇಶದ ಜನವೇ ತಾನೆ? ಅವರು ಚೆನ್ನಾಗಿ ಇಂಗ್ಲಿಷ್ ಕಲಿತವರಾದಲ್ಲದೆ ಈ ಕೆಲಸವನ್ನು ಸಮರ್ಪಕವಾಗಿ ಮಾಡಲಾರರು.''[58]

''ಇಂಗ್ಲಿಷ್ ಒಂದೇ ಅಲ್ಲ. ಯೂರೋಪಿನಲ್ಲಿ ಚೆನ್ನಾಗಿ ಬೆಳೆದಿರುವ ಫ್ರೆಂಚ್, ಜರ್ಮನ್, ರಷ್ಯನ್, ಇಟಾಲಿಯನ್, ಸ್ಪ್ಯಾನಿಷ್ ಪೂರ್ವರಾಷ್ಟ್ರಗಳ ಚೀನಿ ಜಪಾನಿ ವಿಷಯಗಳನ್ನೂ ನೇರವಾಗಿ ಅಲ್ಲಿಂದಲೇ ತಂದುಕೊಳ್ಳುವುದು ಮೇಲು. ಈ ನಾಡಿಂದ ವ್ಯಾಪಾರಕ್ಕೂ, ವಿದ್ಯಾರ್ಜನೆಗೂ, ಉದ್ಯೋಗಕ್ಕೂ, ರಾಯಭಾರ ಮುಂತಾದಕ್ಕೂ, ಅಂತರರಾಷ್ಟ್ರೀಯ

ಸಂಸ್ಥೆ ಸಮ್ಮೇಳನಗಳಿಗೂ ಆ ದೇಶಗಳಿಗೆ ಹೋಗುವವರ ಪ್ರಯೋಜನವನ್ನೂ ಈ ಮೂಲಕ ವಿಚಕ್ಷಣೆಯಿಂದ ಸಾಧಿಸಬಹುದಾಗುವುದು. ಇಲ್ಲವಾದರೆ ಇಂಗ್ಲಿಷ್ ಕಲಿತ ಕೆಲವರ ಪ್ರಾಧಾನ್ಯ ಅತಿಯಾಗುವುದು.... ಆಧುನಿಕ ಕಾಲದ ಜ್ಞಾನವೆಲ್ಲ ಯಾರೋ ಕೆಲವರ ಮೂಲಕ ನಾಡಿಗೆ ಬಂದರೆ ಸಾಕೆಂದು ಆ ಸಂಖ್ಯೆಯನ್ನು ಮಿತಮಾಡುವುದು ಸರ್ವಥಾ ಹಾನಿಕರ. ಅವರ ದರ್ಪ ದಬ್ಬಾಳಿಕೆಗಳಿಗೆ ನಾಡು ಅನಾವಶ್ಯಕವಾಗಿ ಕಾಯಬೇಕಾಗುತ್ತದೆ, ಬಾಗಬೇಕಾಗುತ್ತದೆ. ಇದರಿಂದ ಅವರೂ ಕೆಡುತ್ತಾರೆ. ಇನ್ನೂ ಒಂದು ಸಂಗತಿ: ಯಾರು ಯಾವ ಕೆಲಸಕ್ಕೆ ಒದಗುವರೋ ಮೊದಲೇ ನಿರ್ಣಯ ಮಾಡುವವರು ಯಾರು? ಹೇಗೆ? ಕೇಂದ್ರದಲ್ಲಿ, ಅಂತರರಾಷ್ಟ್ರೀಯ ಮಹಾಸಂಘ ಸಮಾರಂಭಗಳಲ್ಲಿ ಭಾಗವಹಿಸಬೇಕಾಗಲಿ ಅಂತಹದಕ್ಕೆ ಒದಗುವ ನಯಜ್ಞರು, ತಜ್ಞರು, ಅವಧಾನಪಡೆದವರು,ಸಾವಿರಾರು ಜನ — ಒಟ್ಟನಲ್ಲಿ, ಮತ್ತು ಪ್ರತಿರಾಜಕೀಯ ಪಕ್ಷದಲ್ಲಿ ಬೇರೆಯಾಗಿ, — ಸಜ್ಜುಗೊಳ್ಳಬೇಕಾಗಲಿ ಇಂಗ್ಲಿಷ್ ಭಾಷೆಯ ಪೂರ್ಣಸ್ವಾಮ್ಯ ಅಗತ್ಯ. ಒಂದು ವರ್ಷದಲ್ಲಿ, ನಾಲ್ಕು ವರ್ಷದಲ್ಲಿ ಅಥವಾ ನೆನಸಿಕೊಂಡಾಗ ಈ ತರಬಿಯತ್ತು ಆಗದು.'' [59]

''ಬ್ರಿಟಿಷರ ಮೇಲಿನ ಸಹಜಕೋಪ ಅವರ ಭಾಷೆಯ ಮೇಲೂ ಹರಿದಿದೆ'' [60]

ಕನ್ನಡದ ಬೆಳವಣಿಗೆಗೆ ಇಂಗ್ಲಿಷ್ ಅಗತ್ಯವೇನೋ ನಿಜ; ಆದರೆ ಶಿಕ್ಷಣದಲ್ಲಿ ಇಂಗ್ಲಿಷ್ ಮಾಧ್ಯಮವಾಗುವುದು ಸರಿಯಲ್ಲ; ಶಿಕ್ಷಣದ ಎಲ್ಲ ಹಂತಗಳಲ್ಲಿಯೂ ಕನ್ನಡವೇ ಮಾಧ್ಯಮವಾಗಬೇಕು — ಎನ್ನುತ್ತಾರೆ ವಿ.ಸೀ.ಯವರು.[61]

ಮೂರು ಸಂಗತಿಗಳನ್ನು ಇಲ್ಲಿ ಗಮನಿಸಬೇಕು. 1) ಕೆಲವರಿಗೆ ಮಾತ್ರ ಇಂಗ್ಲಿಷ್ ಸಾಕು — ಎನ್ನುವಾಗ, ಹಾಗೆ ಕಲಿತವರ ಪ್ರಾಧಾನ್ಯ ಅತಿಯಾಗುವುದು; ನಾಡು ಅವರ ದಬ್ಬಾಳಿಕೆಗೆ ಒಳಗಾಗುತ್ತದೆ; ಅದರಿಂದ ಕನ್ನಡ ಬೆಳೆಯುವ ಬದಲು ಹಾನಿಗೊಳಗಾಬಹುದು — ಎಂಬ ವಿಚಾರವನ್ನು ಅಲ್ಲಗಳೆಯುವಂತಿಲ್ಲ. ಅಲ್ಲದೆ, ಹೀಗೆ ಇಂಗ್ಲಿಷ್ ಭಾಷೆಯ ಅಗತ್ಯವುಳ್ಳವರು ಯಾರು ಯಾರು ಎಂಬುದು ಮೊದಲೇ ತೀರ್ಮಾನವಾಗುವುದು ಸಾಧ್ಯವಿಲ್ಲ. ಆದ್ದರಿಂದ ಮೊದಲು ಕಲಿಯುವುದು, ಅನಂತರ ಅದರ ಉಪಯೋಗ. ಈ ವಿಚಾರ 'ಇಂಗ್ಲಿಷ್ ಕೆಲವರಿಗೆ ಸಾಕು' ಎಂಬ ಮಾತನ್ನು ನಿರಾಕರಿಸುತ್ತದೆ. 2) ಕನ್ನಡ ಬೆಳೆಯುವುದು,ಅನ್ಯಭಾಷೆಗಳಿಗೆ ವಿಮುಖವಾಗುವುದರಿಂದ ಮತ್ತು ಅದರ ಮೂಲಕ ಅಧ್ಯಯನವನ್ನು ಕಡಿಮೆ ಮಾಡುವುದರಿಂದ ಸಾಧ್ಯವಿಲ್ಲ. ಅನ್ಯಭಾಷೆಗಳನ್ನು ಚೆನ್ನಾಗಿ ಕಲಿತು ಆ ಭಾಷೆಯ

ಜ್ಞಾನಭಂಡಾರವನ್ನು ಕನ್ನಡದಲ್ಲಿ ತರುವ ಮೂಲಕ ಕನ್ನಡವನ್ನು ಬೆಳೆಸಬಹುದು, ಕನ್ನಡದಲ್ಲಿ ಅದರ ಉಪಯೋಗವನ್ನು ಪಡೆಯಬಹುದು. ಕನ್ನಡದ ಬಾಗಿಲನ್ನು ಮುಚ್ಚಬಾರದು, ಬಾಗಿಲನ್ನು ತೆರೆದಿಡಬೇಕು; ಆ ಮೂಲಕವೇ ಕನ್ನಡದ ಬೆಳವಣಿಗೆ ಸಾಧ್ಯ. 3) ಶಿಕ್ಷಣ ಮಾಧ್ಯಮವಾಗಿ ಕನ್ನಡವೇ ಆರಂಭದಿಂದ ಕೊನೆಯವರೆಗೂ ಇರಬೇಕು ಎನ್ನುವುದರಿಂದ, ಭಾಷೆಯನ್ನು ಕಲಿಯುವುದು ಮತ್ತು ಭಾಷೆಯ ಮೂಲಕ ಕಲಿಯುವುದು — ಇವೆರಡನ್ನೂ ಪ್ರತ್ಯೇಕಗೊಳಿಸಿದ್ದಾರೆ. ಆದ್ದರಿಂದ, ಇಂಗ್ಲಿಷ್ ಕಲಿಕೆ, ಕನ್ನಡದ ಬೆಳವಣಿಗೆ — ಈ ಎರಡಕ್ಕೂ ಸಮಾನ ಪ್ರಾಧಾನ್ಯ ಅತ್ಯಾವಶ್ಯಕ ಎನ್ನುವುದು ಈ ಚಿಂತನೆಯಲ್ಲಿ ಬಹಳ ಮುಖ್ಯ.

ಆ) ಎ.ಎನ್. ಮೂರ್ತಿರಾವ್

ಭಾರತಕ್ಕೆ ಇಂಗ್ಲಿಷ್ ಬಂದದ್ದರಿಂದ ಒಳ್ಳೆಯದೇ ಆಯಿತು,[62] ಅದರಿಂದ ನಮ್ಮ ಸಂಸ್ಕೃತಿಯನ್ನು ನಾವು ಕಳೆದುಕೊಳ್ಳಲಿಲ್ಲ — ಎನ್ನುತ್ತಾರೆ ಎ.ಎನ್. ಮೂರ್ತಿರಾಯರು. ಇಂಗ್ಲಿಷ್ ಸಂಸ್ಕೃತಿಗೆ ದಾಸರಾಗದಿದ್ದರೂ ಇಂಗ್ಲಿಷ್ ಭಾಷೆಗೆ ದಾಸರಾಗಿದ್ದೆವು; ಆದರೆ ಇತ್ತೀಚೆಗೆ ಅದರೊಂದಿಗೆ ಹೋರಾಗಿ ಕನ್ನಡ ಗೆದ್ದಿತು,[63] ಎಂದೂ ಅವರು ಹೇಳುತ್ತಾರೆ.

"ಇಂಗ್ಲಿಷಿನ ಸಹಕಾರದಿಂದ ಕನ್ನಡ ಪುಷ್ಟಿಯಾಗುತ್ತದೆ. ಈ ಮಾತನ್ನು ನಾನು ಹೇಳುತ್ತಿರುವುದು ಇಂಗ್ಲಿಷನ್ನು ಕುರಿತ ಅಭಿಮಾನದಿಂದಲ್ಲ. ಇಂಗ್ಲಿಷಿಗೆ ಬದಲಾಗಿ ಫ್ರೆಂಚೋ ಜರ್ಮನೋ ಸುಲಭವಾಗಿ ಕೈಗೆ ಸಿಕ್ಕುವಂತಿದ್ದರೆ ಅವೇ ಆಗಬಹುದಾಗಿತ್ತು. ಐತಿಹಾಸಿಕ ಕಾರಣಗಳಿಂದಾಗಿ ಇಂಗ್ಲಿಷ್ ನಮ್ಮಲ್ಲಿಗೆ ಬಂದದ್ದಾಗಿದೆ. ಪಾಶ್ಚಾತ್ಯ ಮಾದರಿಯ ಶಿಕ್ಷಣ ಆ ಭಾಷೆಯ ನೆರವಿನಿಂದ ಸುವ್ಯವಸ್ಥಿತವಾಗಿ ನಡೆಯುತ್ತಿದೆ, ಅದರಿಂದಾಗಬಹುದಾದ ಪ್ರಯೋಜನವನ್ನು ಪಡೆದುಕೊಳ್ಳದೆ ಅದನ್ನು ಹೊರದೂಡುವುದೇಕೆ?"[64] ಎಂದು ಇಂಗ್ಲಿಷನ್ನು ದ್ವೇಷಿಸಲು ಯಾವ ಕಾರಣವೂ ಇಲ್ಲವೆನ್ನುತ್ತಾರೆ.

ಕನ್ನಡಾಭಿಮಾನದ ಅತಿರೇಕದಲ್ಲಿ 'ಇಂಗ್ಲಿಷ್ ಅನಗತ್ಯ' ಎನ್ನುವವರ ಎರಡು ಮುಖವನ್ನು ವಿಮರ್ಶಿಸುವ ಮೂರ್ತಿರಾಯರು, ಅಭಿಮಾನದಿಂದಾಗಿ ಇಂಗ್ಲಿಷನ್ನು ದ್ವೇಷಿಸಿದರೆ ಕನ್ನಡ ಬೆಳೆಯಲಾರದು — ಎಂದು ಅಭಿಪ್ರಾಯಪಡುತ್ತಾರೆ. ಕನ್ನಡ ಬೆಳೆಯಲು ಇಂಗ್ಲಿಷ್ ಅಗತ್ಯವೆಂದೂ, ಶಾಲಾಕಾಲೇಜು, ನ್ಯಾಯಾಲಯ, ಆಡಳಿತ, ಶಿಕ್ಷಣಗಳಲ್ಲಿ ಕನ್ನಡವೇ ಮಾಧ್ಯಮವಾಗಿರಬೇಕು ಎಂದೂ ಹೇಳುತ್ತಾರೆ.[65] ಹೀಗೆ ಕನ್ನಡ ಅಸ್ತಿತ್ವ ನಾಶವಾಗದಂತೆ ಅದನ್ನು

ಉಳಿಸಬೇಕಾದ ಅಗತ್ಯವನ್ನೂ, ಆದರೆ ಅದು ಬೆಳೆಯಬೇಕಾದರೆ ಇಂಗ್ಲಿಷ್ ಭಾಷೆಯ ಅಗತ್ಯವನ್ನೂ ಎ.ಎನ್. ಮೂರ್ತಿರಾಯರ ಚಿಂತನೆಯಲ್ಲಿ ಕಾಣಬಹುದು.

ಇ) <u>ಶಿವರಾಮ ಕಾರಂತ</u>

ಶಿವರಾಮ ಕಾರಂತರು ಇಂಗ್ಲಿಷ್ ಭಾಷೆ ನಮಗೆ ಅಗತ್ಯವೆನ್ನುವುದು, ಅದು ರಾಷ್ಟ್ರೀಯ – ಅಂತರರಾಷ್ಟ್ರೀಯ ಸಂಪರ್ಕಕ್ಕೆ ಉಪಯುಕ್ತವಾದೀತು – ಎಂದಲ್ಲ; ಅದರಿಂದ ನಮಗೆ ದೊರಕುವ ಜ್ಞಾನಕ್ಕಾಗಿ ನಾವು ಅದನ್ನು ಕಲಿಯಬೇಕು – ಎಂದು. ''ಸದ್ಯಕ್ಕೆ – ನಮ್ಮ ಮುಂದೆ ಕನ್ನಡ, ಇಂಗ್ಲಿಷ್ ಎರಡು ಭಾಷೆಗಳಿವೆ. ಹೆಚ್ಚಿನ ವಿಷಯಜ್ಞಾನ ನಮಗೆ ನಿನ್ನೆ ಮೊನ್ನೆಯ ತನಕ, ಇಂದೂ, ಇಂಗ್ಲೀಷಿನಿಂದ ದೊರೆಯುತ್ತಿದೆ. ಅದನ್ನು ತೊರೆದು ಹಾಕಬೇಕೇ, ಹೇಗೆ? ಭಾಷಾಭಿಮಾನದಷ್ಟೇ ಮುಖ್ಯ, ಅದರ ಮೂಲಕ ದೊರೆಯುತ್ತಿರುವ ಜ್ಞಾನವಲ್ಲ – ಎಂದಾದಲ್ಲ – ಬಹಳ ಯೋಚನೆ ಮಾಡುವ ಪ್ರಸಂಗವೇ ಇಲ್ಲ. ಇಂಗ್ಲೀಷ್ ಪಾಠ ಹೇಳಲು ಸಮಯ ಹಾಳು ಮಾಡಬೇಕಿಲ್ಲ. ಬಹುಸಂಖ್ಯಾತರು ಕನ್ನಡ ನಾಡಿನ ಹೊರಗೆ ಹೋಗಲಾರರು. ಅವರು ನಾಳೆ ಹೋಗಬಹುದಾದ ಊರಿನ, ಊರುಗಳ ಭಾಷೆಗಳನ್ನು ಬೇಡದವರಿಗೂ, ಬೇಕಾದವರಿಗೂ ನಾವು – ಎಳೆತನದಲ್ಲಿ ತಲೆಯಲ್ಲಿ ತುರುಕಿಸಬೇಕಾಗಿಲ್ಲ. ಇಂಗ್ಲೀಷಿನಲ್ಲಿರುವ ಅಪಾರ ಜ್ಞಾನಸಂಪತ್ತಿಲ್ಲದೆ ಹೋದರೆ, ಅದನ್ನು ಬಿಟ್ಟರೆ, ಯಾವ ದುಃಖವೂ ಬರಲಾರದು.''[66]

''ನಮ್ಮ ದೇಶಭಾಷೆಗಳು ಜ್ಞಾನದ ಹೊರ ಎಲ್ಲೆಯಲ್ಲೇ ಓಡಾಡುತ್ತಿರುವ ತನಕ ನಾವು 'ಇಂಗ್ಲಿಷನ್ನು' ಬಹಿಷ್ಕರಿಸಿದರೆ, ನಮ್ಮ ಬುದ್ಧಿಗೇ ಆಹಾರವನ್ನು ವಂಚಿಸುತ್ತೇವೆ.''[67] ಎಂದು ಕಾರಂತರು, ಇಂಗ್ಲಿಷಿನಿಂದ ದೊರಕುವ ಜ್ಞಾನಲಾಭದ ಬಗ್ಗೆ ಹೇಳುತ್ತಾರೆ.

"ನಾವು ವಿವಿಧ ಜ್ಞಾನಕ್ಷೇತ್ರಗಳಲ್ಲಿ ಮುಂದುವರಿದು, ನಮ್ಮ ನಾಡಿನ ಭಾಷೆಯಲ್ಲಿ ಗ್ರಂಥಗಳನ್ನು ಬರೆದು ತುಂಬಿಸುವ ಕಾಲ ಬರುವ ತನಕವೂ ಇಂಗ್ಲೀಷಿನ ನೆರವನ್ನು ತುಚ್ಛೀಕರಿಸಲು ಬರಲಾರದು. ಅನಂತರ – ಕೆಲವು ಅವಶ್ಯಕ ಗ್ರಂಥಗಳ ಅನುವಾದವಿದ್ದರೆ ಸಾಕಾದೀತು. ಆ ಸುದಿನ, ನಮ್ಮ ಸಮೀಪದ ಎಟುಕಿನಲ್ಲಿದೆಯೆಂದು ನನಗೆ ಅನಿಸುತ್ತಿಲ್ಲ'' ಎನ್ನುವಲ್ಲಿ ಕನ್ನಡದ ಮೂಲಕವೇ ಎಲ್ಲ ಜ್ಞಾನಗಳೂ ಲಭ್ಯವಾಗಬೇಕಾದರೆ ನಮ್ಮ ಮುಂದಿರುವ ಕೆಲಸಗಳ ಬಾಹುಳ್ಯವನ್ನು ಕಾರಂತರು ಸೂಚಿಸುತ್ತಾರೆ.

ಶಿಕ್ಷಣ ಮಾಧ್ಯಮವಾಗಿ ಇಂಗ್ಲಿಷ್ ಭಾಷೆಯನ್ನು ಬಳಸಲೇಬಾರದು — ಎಂದು ಕಾರಂತರ ಖಚಿತವಾದ ನಿಲುವು. ಆದರೆ ವಿಜ್ಞಾನ ವಿಷಯಗಳು ಕನ್ನಡದಲ್ಲಿ ದೊರಕುವಂತೆ ಮಾಡುವುದೂ ಅಷ್ಟೇ ಅಗತ್ಯ — ಎನ್ನುತ್ತಾರೆ. ಹೈಸ್ಕೂಲು ತನಕ ಪ್ರಯತ್ನಪಟ್ಟು ಕನ್ನಡದಲ್ಲಿ ಪಾಠ ಹೇಳಬಹುದು; ಅದರಲ್ಲೂ ವೈಜ್ಞಾನಿಕ ವಿಷಯದಲ್ಲಿ ಎಚ್ಚರ ಬೇಕು; ಮುಂದೆ ಪ್ರಾಂತೀಯ ಭಾಷೆಗಳೇ ಶಿಕ್ಷಣ ಮಾಧ್ಯಮವಾಗಬೇಕು — ಎಂದರೆ, ಅದಕ್ಕೆ ಕನ್ನಡದಲ್ಲಿ ಗ್ರಂಥಗಳು ಅಲಭ್ಯವಾಗಿರುವಾಗ ಅದು ಹೇಗೆ ಸಾಧ್ಯ — ಎಂದು ಪ್ರಶ್ನಿಸುತ್ತಾರೆ.[68]

ಇಂಗ್ಲಿಷ್ ಭಾಷೆಯ ಬಗೆ ಕಾರಂತರ ಮನೋಭಾವ ಹೀಗಿದೆ: ''ಇಂಗ್ಲಿಷ್ ಭಾಷೆಯನ್ನು ಇನ್ನಿನ್ನು ಉಪಯೋಗಿಸುವುದು ನಮ್ಮ ದಾಸ್ಯದ ಲಕ್ಷಣವೆನ್ನುವವರಿದ್ದಾರೆ.... ಗಡಿಯಾರ, ರೇಡಿಯೋ, ಸಾವಿರಾರು ಔಷಧಗಳು, ಇನ್ನು ಎಷ್ಟೆಷ್ಟೋ ಸಾಮಗ್ರಿಗಳು— ವಿದೇಶೀಯವಾದವು, ನಮ್ಮ ಮನೆಯಲ್ಲಿ, ಮೈಯ ಮೇಲೆ ಮೆರೆದರೆ ದಾಸ್ಯ ಬರುವುದಿಲ್ಲ. ಜಗತ್ತಿನ ಜ್ಞಾನಕ್ಕೆ ಇಂದು ಹೆಬ್ಬಾಗಿಲನಂತಿರುವ ಇಂಗ್ಲೀಷನ್ನು ಮುಂದುವರಿಸಿಕೊಂಡು ಹೋದರೆ ಮಾತ್ರವೇ ಗುಲಾಮಗಿರಿ — ಎದುರು ಕಾಣಿಸುತ್ತಿದೆಯೇನು?''[69] ಆದರೆ ಹಾಗೆಂದುಕೊಂಡು ಇಂಗ್ಲಿಷನ್ನೇ ಶಿಕ್ಷಣಮಾಧ್ಯಮವಾಗಿಸುವುದರ ಬಗ್ಗೆ ಕಾರಂತರು ವಿರೋಧ ವ್ಯಕ್ತಪಡಿಸುತ್ತಾರೆ:

''ಮಾತೃಭಾಷೆಗಳಲ್ಲಿ ಇಂಗ್ಲೀಷನ್ನು ಸೇರಿಸಿದುದು ತೀರ ತಪ್ಪು. ಅದು, ಬೆಂಗಳೂರಿನ ಕಂಟೋನ್ಮೆಂಟಿನ ಆಂಗ್ಲೋ ಇಂಡಿಯನರ ಮಾತೃಭಾಷೆ. ಅವರ ಸಂಖ್ಯೆ ತೀರ ಸಣ್ಣದು. ಅವರಲ್ಲದೆ, ಉಳಿದ ಭಾಷಿಕರ ಮಾತೃಭಾಷೆ ಇಂಗ್ಲೀಷು ಎಂದು ಪರಿಗಣಿಸ ಕೂಡದು. ಇವತ್ತು ತಲೆಯೆತ್ತಿಕೊಂಡಿರುವ ಇಂಗ್ಲೀಷು ಮಾಧ್ಯಮ ( English Medium) ಶಾಲೆಗಳ ದೆಸೆಯಿಂದ, ದೇಶಭಾಷೆಗಳಿಗೆ ವಿಶೇಷ ಹಾನಿಯಾದೀತು''[70]

ಒಟ್ಟಿನಲ್ಲಿ ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತು ಕಾರಂತರ ಚಿಂತನೆಯಲ್ಲಿ —

1) ಇಂಗ್ಲಿಷನ್ನು ಬಹಿಷ್ಕರಿಸುವಂತಿಲ್ಲ; ಹಾಗೆ ಮಾಡಿದರೆ ಬಹಳಷ್ಟನ್ನು ಕಳೆದುಕೊಳ್ಳುತ್ತೇವೆ.

2) ಹಾಗೆಂದು ಇಂಗ್ಲಿಷ್ ಮಾತೃಭಾಷೆಯಾಗದು; ಅದು ಶಿಕ್ಷಣಮಾಧ್ಯಮವಾಗದು.

— ಈ ಎರಡು ವಿಷಯಗಳು ಪ್ರಧಾನವಾಗಿವೆ. ಶಾಸನ, ನ್ಯಾಯಾಂಗ, ಉಚ್ಚಶಿಕ್ಷಣ, ಆಡಳಿತ ಇತ್ಯಾದಿಗಳಲ್ಲೆಲ್ಲ ಕನ್ನಡಕ್ಕೆ 'ಸಾರ್ವಭೌಮತ್ವ ಬೇಕು' ಎಂದರೆ ಅದು ಮಿತಿಮೀರಿದ ಆಸೆಯಾದೀತು — ಎನ್ನುತ್ತಾರೆ. ಹಾಗಿದ್ದೂ, ಕನ್ನಡದಲ್ಲಿ ದುಡಿಯುವ, ಕನ್ನಡದಲ್ಲೇ ಬದುಕುವ ಅಗತ್ಯವನ್ನು ಕಾರಂತರು ಮನಗಾಣುತ್ತಾರೆ.

ಈ) <u>ಗೋಪಾಲಕೃಷ್ಣ ಅಡಿಗ</u>

ಕನ್ನಡ ಬೆಳೆಯಲು ಇಂಗ್ಲಿಷ್ ಭಾಷೆಯನ್ನು ಬಿಟ್ಟುಕೊಟ್ಟರೆ ವೈಜ್ಞಾನಿಕವಾಗಿ ಅತಿಸೂಕ್ಷ್ಮವಾಗಿ ಸಂಶೋಧನೆ ಮಾಡುವ, ಅದನ್ನು ಇಂಗ್ಲಿಷನಲ್ಲಿ ಅಭಿವ್ಯಕ್ತಿಗೊಳಿಸುವ ಪಾಶ್ಚಾತ್ಯರ ಜೊತೆಗೆ ಸ್ಪರ್ಧಿಸಲಾರದೆ, ವೈಜ್ಞಾನಿಕವಾಗಿ ಮುಂದುವರಿದ ರಾಷ್ಟ್ರಗಳ ಸರಿಸಮಕ್ಕೆ ನಾವು ಏರಲಾರೆವು[71] ಎಂದು ಗೋಪಾಲಕೃಷ್ಣ ಅಡಿಗರು ಅಭಿಪ್ರಾಯಪಡುತ್ತಾರೆ. ಇಂಗ್ಲಿಷ್ ಪರಕೀಯ ಎನ್ನುವುದಾದರೆ, ನಾವು ಒಪ್ಪಿರುವ ಪ್ರಜಾತಂತ್ರ ರಾಜ್ಯಪದ್ಧತಿ, ಕಾನೂನು, ನ್ಯಾಯ, ವೈದ್ಯ ವಿಧಾನ, ಸೈನಿಕ ಶಿಕ್ಷಣ, ವಿಮಾನಗಳು — ಇವೆಲ್ಲ ಪರಕೀಯವಲ್ಲವೆ? — ಎನ್ನುತ್ತಾರೆ.[72]

ಆದರೆ ಇಂಗ್ಲಿಷನ್ನು ಕಲಿತು, ಸಂಶೋಧನೆ ಇತ್ಯಾದಿಗಳನ್ನು ಮಾಡಿದರೆ ಸಾಲದು; ''ಕನ್ನಡದಲ್ಲೇ ಹೇಳಲು ಪ್ರಯತ್ನಿಸುವಂಥ ಅತ್ಯುಚ್ಚವರ್ಗದ ಬುದ್ಧಿವ್ಯವಸಾಯವನ್ನು ನಡೆಸಿದಲ್ಲಿ ಮಾತ್ರ ಅದು ಕ್ರಮೇಣ ನಮ್ಮ ಬುದ್ಧಿಯ ಭಾಷೆಯಾಗಿ ಬೆಳೆಯಬಹುದು''[73] ಎಂದು ಅಡಿಗರು ಅಭಿಪ್ರಾಯಪಡುತ್ತಾರೆ.

ಅಡಿಗರು ಇಂಗ್ಲಿಷ್ ಕಲಿಯಲು ಕಷ್ಟ — ಎಂಬ ಮಾತನ್ನು ಒಪ್ಪುವುದಿಲ್ಲ; ''ಅಗತ್ಯವಾದಲ್ಲಿ ಅದನ್ನು ಕಲಿಯಬೇಕು — ಕಷ್ಟಪಟ್ಟೂ ಕಲಿಯಬೇಕು''[74] — ಎನ್ನುತ್ತಾರೆ.

ಅಡಿಗರು ಹೇಳಿರುವ ವಿಷಯಗಳಲ್ಲಿ, ವೈಜ್ಞಾನಿಕ ವಿಷಯಕವಾದ ಶಿಕ್ಷಣಕ್ಕೂ ದೇಶದೊಳಗಿನ ಭಾಷೆಗಳ ನಡುವಿನ ಸಂಪರ್ಕಕ್ಕೂ ಇಂಗ್ಲಿಷ್ ಅಗತ್ಯವೆಂಬುದೂ, ಇಂಗ್ಲಿಷ್ ಜ್ಞಾನ ಪಡೆದು ಕನ್ನಡದಲ್ಲಿ ಬರೆದುದರಿಂದ ಕನ್ನಡ ಭಾಷೆ ಬೆಳೆಯುತ್ತದೆ — ಎಂಬುದೂ ಬಹಳ ಮುಖ್ಯ ವಿಚಾರಗಳಾಗಿವೆ. ಕನ್ನಡದ ಅಭಿಮಾನ, ಅದರ ಬೆಳವಣಿಗೆಗೆ ಅಡ್ಡಿಯಾಗಬಾರದು — ಎಂಬ ವಿಚಾರಕ್ಕೆ ಅಡಿಗರು ಒತ್ತು ನೀಡುತ್ತಾರೆ. ಅದನ್ನು ಕನ್ನಡದ ಬೆಳವಣಿಗೆಯ ದೃಷ್ಟಿಯಿಂದಲೇ

ಹೇಳಿದ್ದರಿಂದ, ಅಲ್ಲಿ ಕನ್ನಡಪರ ಚಿಂತನೆಯ ಕೊರತೆ ಕಾಣಿಸುವುದಿಲ್ಲ; ಇಂಗ್ಲಿಷ್-ಕನ್ನಡ ಸಂಬಂಧದ ಕುರಿತ ಚಿಂತನೆ ಹೆಚ್ಚು ಸತ್ವಯುತವಾಗಿ ಕಾಣಿಸುತ್ತದೆ.

ಉ) <u>ಯು.ಆರ್.ಅನಂತಮೂರ್ತಿ</u>

ವಿಷಯಗ್ರಹಣಕ್ಕೆ ಇಂಗ್ಲಿಷ್ ಕಲಿತು ಅಭಿವ್ಯಕ್ತಿಗೆ ಕನ್ನಡವನ್ನು ಬಳಸುವ ಮೂಲಕ ಕನ್ನಡದ ಬೆಳವಣಿಗೆಯಾದೀತು; ಕನ್ನಡಿಗರ ಅಭಿವೃದ್ಧಿಯಾದೀತು — ಎಂದು ಅನಂತಮೂರ್ತಿ ಯವರ ನಿಲುವು. ''ಸಾಹಿತ್ಯದಲ್ಲಿ ಆಗಲಿ, ವಿಜ್ಞಾನದಲ್ಲಿ ಆಗಲಿ, ನಾವು ಅನನ್ಯರೀತಿಯಲ್ಲಿ ಬೆಳೆಯಲು ನಮ್ಮ ಜೀವನದಲ್ಲಿ ನಾವು ತೊಡಗಿದವರಾಗಬೇಕು; ಮತ್ತು ನಮ್ಮ ಪ್ರಜ್ಞೆಯನ್ನು ಬೇರೆ ಭಾಷೆಗಳಿಗೆ ತೆರೆದುಕೊಂಡವರಾಗಿರಬೇಕು. ಅಂದರೆ: ನಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ನಾವು ಕನ್ನಡವನ್ನು ಬಳಸಬೇಕು. ಆದರೆ ವಿಷಯಗ್ರಹಣಕ್ಕಾಗಿ ಅವಶ್ಯವಾದ ಭಾಷೆಗಳನ್ನೆಲ್ಲ ಕಲಿಯಬೇಕು.'' [75] — ಎಂದು ಕನ್ನಡದ ಬೆಳವಣಿಗೆಗೆ ಹೇಗೆ ಎರಡು ಕಾರ್ಯವೂ ಅನಿವಾರ್ಯ — ಎಂಬುದನ್ನು ತಿಳಿಸುತ್ತಾರೆ.

ಕನ್ನಡ ಬೆಳೆಯುವ ಮತ್ತು ಇಂಗ್ಲಿಷನ್ನು ಕೈಬಿಡುವ ಕಾರ್ಯ ಪರಸ್ಪರ ಸಾಪೇಕ್ಷ ವಾಗಿದ್ದು, ನಮ್ಮ ಅಭಿವ್ಯಕ್ತಿಮಾಧ್ಯಮವನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಬದಲಸುವುದು ತೊಡಕಾಗಿದೆ — ಎಂದು ಅನಂತಮೂರ್ತಿಯವರು ಅಭಿಪ್ರಾಯಪಡುತ್ತಾರೆ.[76]

ಶಿಕ್ಷಣದ ಕುರಿತು, ''ಬೋಧನೆ ಪ್ರೈಮರಿ ಹಂತದಿಂದ ಹಿಡಿದು ಸ್ನಾತಕೋತ್ತರದ ತನಕ ಕನ್ನಡದಲ್ಲೇ ಇರಲಿ — ಎನ್ನುವಾಗ ಎಲ್ಲರಿಗೂ ಇಂಗ್ಲಿಷ್ ಭಾಷೆಯನ್ನು ಈಗ ಕಲಿಸುವುದಕ್ಕಿಂತ ಚೆನ್ನಾಗಿ ಕಲಿಸಬೇಕು — ಎನ್ನಬೇಕು.... ವಿದ್ಯಾಭ್ಯಾಸದ ಕೊನೆಯ ಹಂತದವರೆಗೆ ಹೀಗೆ ಕಲಿಸುವುದಕ್ಕೆ ವಿರೋಧವಿದೆ ಎನ್ನಿ. ಹಾಗಿದ್ದಲ್ಲಿ ಹತ್ತನೇ ಇಯತ್ತೆಯ ತನಕವಾದರೂ ಕನ್ನಡ ಮಾಧ್ಯಮವಾಗಬೇಕು, ಇಂಗ್ಲಿಷಿಗೆ ಒತ್ತಡವಿದ್ದಲ್ಲಿ ಉಭಯ ಮಾಧ್ಯಮ ಜಾರಿಗೆ ಬರಬೇಕು. ಇದಕ್ಕಿಂತ ನಾವು ಹಿಂದೆ ಸರಿಯಲೇಕೂಡದು'' [77] ಎನ್ನುತ್ತಾರೆ.

ಕನ್ನಡ ಭಾಷೆಯ ಬೆಳವಣಿಗೆಗೆ ಭಾಷಿಕವಲ್ಲದ ಇನ್ನಿತರ ಕಾರಣಗಳನ್ನು ಕೊಡುತ್ತ ''ಹೆಚ್ಚು ಜನ ವಿದ್ಯಾವಂತರಿಗೆ ಉದ್ಯೋಗಗಳನ್ನು ಕಲ್ಪಿಸಬಲ್ಲಂತಹ ವೈಜ್ಞಾನಿಕ ಕೈಗಾರಿಕಾ ಕ್ರಾಂತಿಯನ್ನು ತನ್ನ ನಾಡಿನಲ್ಲಿ ಅಪೇಕ್ಷಿಸಬೇಕಾಗುತ್ತದೆ'' [78] ಎನ್ನುತ್ತಾರೆ.

ಅನಂತಮೂರ್ತಿಯವರು ಕನ್ನಡ ಬೆಳೆಯಬೇಕಾದ ರೀತಿಯನ್ನು ಹೇಳುವಾಗ 'ವಿಷಯಗ್ರಹಣಕ್ಕೆ ಇಂಗ್ಲಿಷ್ ಕಲಿತು' ಎನ್ನುತ್ತಾರೆ; ಅದರಿಂದ ಉಂಟಾಗಬಹುದಾದ ಹಾನಿಯನ್ನು ತಡೆಗಟ್ಟಲು 'ಕನ್ನಡವನ್ನು ಅಭಿವ್ಯಕ್ತಿಗೆ ಬಳಸುವ' ಮಾರ್ಗವನ್ನು ಹೇಳುತ್ತಾರೆ. ಈ ಎರಡೂ ಮಾರ್ಗಗಳಲ್ಲಿ ಕೆಲಸ ನಡೆಯಬೇಕಾದುದು ಅತ್ಯಂತ ಮುಖ್ಯವಾದ ಸಂಗತಿಯಾಗಿದೆ — ಎನ್ನುತ್ತಾರೆ.

ಕನ್ನಡದ ಬೆಳವಣಿಗೆಗೆ ಕನ್ನಡ, ಇಂಗ್ಲಿಷ್ ಎರಡು ಭಾಷೆಗಳಿಗೂ ಪ್ರಾಮುಖ್ಯತೆ ನೀಡಬೇಕು — ಎನ್ನುವವರ ಮುಖ್ಯ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು:

1) ಕನ್ನಡದ ಅಭಿಮಾನ ಇಂಗ್ಲಿಷಿನ ನಿರಾಕರಣೆಗೆ ಕಾರಣವಾಗಬಾರದು.

2) ಇಂಗ್ಲಿಷ್ ಭಾಷೆ ಸಮೃದ್ಧ ಹಾಗೂ ವ್ಯಾಪಕ; ಆದ್ದರಿಂದ ನಮ್ಮ ಜ್ಞಾನಾಭಿವೃದ್ಧಿಗೆ ಮತ್ತು ಕರ್ನಾಟಕದ ಹೊರಪ್ರದೇಶಗಳೊಂದಿಗಿನ ಸಂಪರ್ಕಕ್ಕೆ ಅದನ್ನು ಅವಲಂಬಿಸುವುದು ಅನಿವಾರ್ಯ.

3) ಕನ್ನಡ ಭಾಷೆ ಸಮೃದ್ಧವಾಗಬೇಕಾದರೆ ಇಂಗ್ಲಿಷನ್ನು ಚೆನ್ನಾಗಿ, ಆದಷ್ಟು ಜನ ಕಲಿಯಬೇಕು. ಹಾಗೆ ಸಮೃದ್ಧವಾಗಲು ಆಗಬೇಕಾದ ಕೆಲಸ ಅತ್ಯಂತ ದೊಡ್ಡ ಪ್ರಮಾಣದ್ದು; ಅದು ಆಗುವವರೆಗೂ ಇಂಗ್ಲಿಷನ್ನು ಬಿಡುವಂತಿಲ್ಲ; ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಬೋಧನೆಗೆ ಇಂಗ್ಲಿಷನ್ನು ಅವಲಂಬಿಸಬೇಕು.

4) ಇಂಗ್ಲಿಷ್ ಓದಿ ತಿಳಿದುಕೊಂಡದ್ದನ್ನು ಕನ್ನಡಕ್ಕೆ ತರಬೇಕು; ಕನ್ನಡದಲ್ಲಿ ಬರೆಯುವ ಮೂಲಕ ಕನ್ನಡಿಗರು ಸೃಜನಶೀಲರಾಗಬೇಕು. ಆಗ ನಾಡೂ ಅಭಿವೃದ್ಧಿಹೊಂದುತ್ತದೆ; ಭಾಷೆಯೂ ಬೆಳೆಯುತ್ತದೆ.

5) ಪ್ರಾಥಮಿಕ ಶಿಕ್ಷಣ ಮಾಧ್ಯಮವಾಗಿ ಇಂಗ್ಲಿಷ್ ಇರಕೂಡದು; ಕನ್ನಡವೇ ಇರಬೇಕು. ಇಂಗ್ಲಿಷ್ ಭಾರತದಲ್ಲಿ (ಆಂಗ್ಲೋ — ಇಂಡಿಯನ್ನರಿಗೆ ಹೊರತು) ಮಾತೃಭಾಷೆಯಾಗದು.

6) ಕನ್ನಡಿಗ ಕೇವಲ ಕನ್ನಡ ಭಾಷೆಯಿಂದಷ್ಟೇ ಬೆಳೆಯಲಾರ; ಆರ್ಥಿಕವಾಗಿ, ವೈಜ್ಞಾನಿಕವಾಗಿ ಕನ್ನಡನಾಡು ಸಾಮರ್ಥ್ಯ ಪಡೆದಿರಬೇಕು. ಅದಕ್ಕೆ ಕನ್ನಡಭಾಷೆ ಸಮರ್ಥವಾಗಿರಬೇಕು, ಸೃಜನಶೀಲವಾಗಿರಬೇಕು.

ಸ್ವಾತಂತ್ರ್ಯೋತ್ತರ ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತ ಚಿಂತನೆಯಲ್ಲಿ ಈ ಐದು ಅಂಶಗಳಲ್ಲಿ (ರಾಷ್ಟ್ರಭಾಷೆಯ ಕಲ್ಪನೆ, ಇಂಗ್ಲಿಷ್ ಮಾಧ್ಯಮ ಶಿಕ್ಷಣದ ಸಮಸ್ಯೆ,

ಅಲ್ಪಸಂಖ್ಯಾತರ ವಿಚಾರ, ಕನ್ನಡದ ಅನುಷ್ಠಾನ, ಇಂಗ್ಲಿಷ್ – ಕನ್ನಡ ಸಂಬಂಧ) ಪ್ರತಿಯೊಂದೂ ಅವುಗಳದೇ ಆದ ಸಮಸ್ಯೆಗಳನ್ನು ಎದುರಿಸುತ್ತಿವೆ. ಪರಸ್ಪರ ಸಂಬಂಧವಿರುವ ಈ ಅಂಶಗಳು ತೋರಿಕೆಯಲ್ಲಿ ಬೇರೆ ಬೇರೆಯಾಗಿ ಕಂಡರೂ, ಇವುಗಳಲ್ಲಿ ಯಾವುದೇ ಒಂದರ ಕುರಿತು ಚಿಂತಿಸತೊಡಗಿದಾಗ ಉಳಿದೆಲ್ಲ ವಿಚಾರಗಳೂ ಬಂದೇ ಬರುತ್ತವೆ. ಆದ್ದರಿಂದ, ಆಯಾ ವಿಷಯಗಳ ಕುರಿತು ಹೆಚ್ಚು ಚಿಂತಿಸಿದವರು ಉಳಿದ ವಿಷಯಗಳ ಬಗ್ಗೆ ಚಿಂತಿಸಿಲ್ಲವೆಂದಾಗಲೀ, ಅದರ ಪ್ರಾಮುಖ್ಯತೆಯನ್ನು ಗಮನಿಸಿಲ್ಲವೆಂದಾಗಲೀ ಹೇಳುವುದು ಸಂಪೂರ್ಣವಾಗಿ ನಿಜವಾಗಲಾರದು. ಆದರೆ ಒಬ್ಬೊಬ್ಬರ ಚಿಂತನೆಯ ರೀತಿಗನುಗುಣವಾಗಿ ಅವರ ಚಿಂತನೆಗಳಲ್ಲಿ ಕೆಲವು ವಿಷಯಗಳು ಪ್ರಧಾನವಾಗಿ ಬರುತ್ತವೆ. ಉದಾಹರಣೆಗೆ, ಇಂಗ್ಲಿಷ್ ಮಾಧ್ಯಮದ ಬಗ್ಗೆ ಹಾ.ಮಾ.ನಾ., ಎಚ್.ನರಸಿಂಹಯ್ಯ; ಭಾಷಾ ಅಲ್ಪಸಂಖ್ಯಾತರು ಹಾಗೂ ಗಡಿಸಮಸ್ಯೆಗಳ ಬಗ್ಗೆ ಮಹದೇವ ಬಣಕಾರ ಹೆಚ್ಚು ಬರೆದಿದ್ದಾರೆ. ಇಂಗ್ಲಿಷ್ ಭಾಷೆಯ ಕುರಿತು ವ್ಯಕ್ತವಾಗುವ ಅನೇಕ ಅಭಿಪ್ರಾಯಗಳಲ್ಲಿ ದ್ವಂದ್ವವಿದೆ. ಅದಕ್ಕೆ ಕಾರಣವೂ ಸ್ಪಷ್ಟವಾಗಿದೆ: ಇಂಗ್ಲಿಷ್ ನಮ್ಮಲ್ಲಿಗೆ ಬಂದದ್ದೂ ನೆಲೆಯೂರಿದ್ದೂ ದ್ವಂದ್ವವನ್ನು ಸೃಷ್ಟಿಸುವ ಮೂಲಕವೇ: ಅದು ಒಳ್ಳೆಯದನ್ನು ತಂದಿತು, ಹಾಗೆಯೇ ಕೆಡುಕನ್ನೂ ಉಂಟುಮಾಡಿತು. ಅದು ಉಂಟುಮಾಡಿದ ಒಳಿತು, ಕೆಡುಕುಗಳಲ್ಲಿ ಕನ್ನಡ ಚಿಂತಕರು ಯಾವುದಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದರೋ, ಅವರ ಚಿಂತನೆಯೂ ಅದಕ್ಕನುಗುಣವಾಗಿ ರೂಪುಗೊಂಡಿದೆ. ಅದಕ್ಕೆ, ಅವರು ಅದನ್ನು ಕಂಡ ರೀತಿಯೂ, ಅವರ ಓದು ಹಾಗೂ ಚಿಂತನೆಯ ಪರಿಣಾಮವೂ ಬಹುಮಟ್ಟಿಗೆ ಕಾರಣವಾಗಿರಬಹುದು.

## ಟಿಪ್ಪಣಿಗಳು

1. ಭಾರತದ ಭಾಷಾ ಸಮಸ್ಯೆ, ಪು.22
2. ಸಂಪಾದಕೀಯ — ಸಂಪುಟ 2, ಪು.43
3. ಭಾರತದ ಭಾಷಾ ಸಮಸ್ಯೆ, ಪು.25
4. ಅದೇ., ಪು.26
5. ಅದೇ., ಪು.38
6. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.448;<br>ಸಂಪುಟ 3, ಪು.110 ಮತ್ತು, 317
7. ಅಧ್ಯಕ್ಷರ ಭಾಷಣಗಳು — ಸಂಪುಟ 2, ಪು.469—71 ಮತ್ತು, 531<br>ಸಂಪುಟ 3, ಪು.354
8. ಸಂಪಾದಕೀಯ — ಸಂಪುಟ 3, ಪು.134
9. ಅಧ್ಯಕ್ಷರ ಭಾಷಣಗಳು — ಸಂಪುಟ 3, ಪು.109, ಮತ್ತು,<br>ಷಷ್ಠಿನಮನ, ಪು.68
10. ವಿಚಾರ ಕ್ರಾಂತಿಗೆ ಆಹ್ವಾನ, ಪು.117—119
11. ಸಂಪಾದಕೀಯ — ಸಂಪುಟ 2, ಪು.42—43
12. ಅಧ್ಯಕ್ಷರ ಭಾಷಣಗಳು — ಸಂಪುಟ 3, ಪು.353
13. ಅದೇ., ಪು.353
14. ಅದೇ., ಪು.354
15. ಅದೇ., ಪು.354
16. ಅದೇ., ಪು.109
17. ಸಂಪಾದಕೀಯ — ಸಂಪುಟ 4, ಪು.349
18. ಅದೇ., ಪು.295
19. ಸಂಪಾದಕೀಯ — ಸಂಪುಟ 4, ಪು.295 ಮತ್ತು, 349
20. ಅದೇ., ಪು.194—95
21. ಅಧ್ಯಕ್ಷರ ಭಾಷಣಗಳು — ಸಂಪುಟ 3, ಪು.79 ರಲ್ಲಿ ವಿ.ಸೀ. ಯವರ<br>ಅಭಿಪ್ರಾಯವನ್ನು ಗಮನಿಸಬಹುದು.
22. ಸಮಗ್ರ ಗದ್ಯ — ಸಂಪುಟ 1, ಪು.241

23. ಶಿವರಾಮ ಕಾರಂತರ ಲೇಖನಗಳು — ಸಂಪುಟ 2, ಪು.12
ಸಮಗ್ರ ಗದ್ಯ — ಸಂಪುಟ 1, ಪು.242
ಕನ್ನಡ ಮನಸ್ಸು ಪು.78

24. ಅಧ್ಯಕ್ಷರ ಭಾಷಣಗಳು — ಸಂಪುಟ 4, ಪು.303, 304 (ಹಾಮಾನಾ)
ಸಮಗ್ರಗದ್ಯ — ಸಂಪುಟ 1, ಪು.242 (ಅಡಿಗ)
ಕನ್ನಡದ ಹಿತ, ಪು.     (ಅನಂತಮೂರ್ತಿ)

25. ಸಮಗ್ರ ಗದ್ಯ — ಸಂಪುಟ 1, ಪು.242

26. ಅಧ್ಯಕ್ಷರ ಭಾಷಣಗಳು — ಸಂಪುಟ 4, ಪು.307
ಕನ್ನಡ ಮನಸ್ಸು, ಪು.101—116

27. ಕನ್ನಡದ ಹಿತ, ಪು.3

28. ಕನ್ನಡ ಮನಸ್ಸು, ಪು.43

29. ಸಮಗ್ರಗದ್ಯ — ಸಂಪುಟ 1, ಪು.240

30. ಕನ್ನಡವನ್ನು ಕಟ್ಟುವ ಕೆಲಸ, ಪು.21

31. ತೆರೆದ ಮನ, ಪು.146

32. ಕನ್ನಡ ಮನಸ್ಸು, ಪು.107—109

33. ಶಿವರಾಮ ಕಾರಂತರ ಲೇಖನಗಳು, ಪು.41
34. ಕನ್ನಡ ಮನಸ್ಸು, ಪು.110,115
35. ಎಚ್. ನರಸಿಂಹಯ್ಯ: ದಿ ಟೈಮ್ಸ್ ಆಫ್ ಇಂಡಿಯಾ, ಜೂನ್ 15. 1994,
ಶಿಕ್ಷಣ ಮಾಧ್ಯಮ ಕುರಿತ ಸಮೀಕ್ಷೆಯೊಂದರಲ್ಲಿ

36. ಕನ್ನಡ ಪ್ರಭ, 5—6—94; ಶಿಕ್ಷಣ ಮಾಧ್ಯಮ — ಸಮೀಕ್ಷೆ, ಎ.ಓ.ಆವಲಮೂರ್ತಿ.

37. ಜಿ.ಎಸ್.ಶರ್ಮಾ, ಶೇಷಾಚಾರ್: ದಿ ಟೈಮ್ಸ್ ಆಫ್ ಇಂಡಿಯಾ, ಜೂನ್ 15, 1994

38. ಕನ್ನಡ ಮನಸ್ಸು, ಪು.113

39. ಅವಲೋಕನ, ಪು.395—96

40. ಅಧ್ಯಕ್ಷರ ಭಾಷಣಗಳು — ಸಂಪುಟ 4, ಪು.33

41. ಅದೇ.

42. "ಬಹುಮುಖ್ಯವಾದ ತಿಳುವಳಿಕೆಯು ಸರ್ವಸಾಮಾನ್ಯವನ್ನು ಎಲ್ಲೋ ಕೆಲವರಿಗೆ ವಹಿಸಿದಂತಾಗುತ್ತದೆ... ಆಧುನಿಕ ಕಾಲದ ಜ್ಞಾವನ್ನೆಲ್ಲ ಯಾರೋ ಕೆಲವರ ಮೂಲಕ ನಾಡಿಗೆ ಬಂದರೆ ಸಾಕೆಂಬ ಆ ಸಂಖ್ಯೆಯನ್ನು ಮಿತ ಮಾಡುವುದು ಸರ್ವಥಾ ಹಾನಿಕರ."

— ವಿ.ಸೀ., ಅಧ್ಯಕ್ಷರ ಭಾಷಣಗಳು — ಸಂಪುಟ 5, ಪು.21

43. ಷಷ್ಠಿನಮನ, ಪು. 69–70

44. ಅದೇ; ಪು.70

45. ಅದೇ., ಪು.74

46. ಅದೇ., ಪು.114

47. ಅದೇ., ಪು.117

48. ಅದೇ., ಪು.109

49. ರಾಷ್ಟ್ರಕವಿ ಭಾಷಣಗಳು, ಪು.115

50. ಅಧ್ಯಕ್ಷರ ಭಾಷಣಗಳು – ಸಂಪುಟ 4, ಪು.121

51. ಅದೇ., ಪು.122

52. ಅದೇ.

53. ಅದೇ., ಪು.123–24

54. ಅದೇ., ಪು.123

55. ಅದೇ.

56. ಕನ್ನಡವನ್ನು ಕಟ್ಟುವ ಕೆಲಸ, ಪು.21–22

57. ಅದೇ., ಪು.24

58. ಅಧ್ಯಕ್ಷರ ಭಾಷಣಗಳು – ಸಂಪುಟ 3, ಪು.20

59. ಅದೇ., ಪು.21

60. ಅದೇ., ಪು.22

61. ಅದೇ., ಪು.22–23

62. ಅಧ್ಯಕ್ಷರ ಭಾಷಣಗಳು, ಸಂಪುಟ–4, ಪು.267

63. ಅದೇ., ಪು.269

64. ಅದೇ., ಪು.282

65. ಅದೇ., ಪು.281

66. ಶಿವರಾಮ ಕಾರಂತರ ಲೇಖನಗಳು – ಸಂಪುಟ 2, ಪು.32

67. ಅದೇ., ಪು.33

68. ಅದೇ., ಪು.33–34

69. ಅದೇ., ಪು.35

70. ಅದೇ., ಪು.37

71. ಸಮಗ್ರ ಗದ್ಯ (ಅಡಿಗ) — ಸಂಪುಟ 1, ಪು.231

72. ಅದೇ.

73. ಅದೇ., ಪು.230

74. ಅದೇ., ಪು.243

75. ಪ್ರಜ್ಞೆ ಮತ್ತು ಪರಿಸರ, ಪು.73

76. ಅದೇ.

77. ಕನ್ನಡದ ಹಿತ, ಪು.10

78. ಪ್ರಜ್ಞೆ ಮತ್ತು ಪರಿಸರ, ಪು.69

ಅಧ್ಯಾಯ 6: ಸಮಾರೋಪ

ಆರಂಭದಲ್ಲಿ ನೋಡಲಾದ ಭಾಷಾಸಮಸ್ಯೆಗಳ ಹಿನ್ನೆಲೆಯಲ್ಲಿ ಇಂಗ್ಲಿಷ್ – ಕನ್ನಡ ಸಂಬಂಧದ ಕುರಿತು ಕನ್ನಡಿಗರಲ್ಲಿ ಮಾಡಿಬಂದ ಚಿಂತನೆಗಳನ್ನು ಒಟ್ಟಾಗಿ ನೋಡಿ ವಿಶ್ಲೇಷಿಸುವುದು ಅಗತ್ಯ. ಸ್ವಾತಂತ್ರ್ಯಕ್ಕೆ ಮೊದಲು ಮತ್ತು ನಂತರ ನಡೆದ ಚಿಂತನೆಗಳಲ್ಲಿ ಕಂಡುಬರುವ ಕೆಲವು ಸಂಗತಿಗಳನ್ನು ಇಲ್ಲಿ ಗುರುತಿಸಲಾಗಿದೆ.

ಕಾಲ, ಪರಿಸ್ಥಿತಿ, ಮೌಲ್ಯಗಳ ನಿಯಂತ್ರಣ: ರಾಜಕೀಯ ಆಗುಹೋಗುಗಳು, ಆರ್ಥಿಕ ಸ್ಥಿತಿಗತಿಗಳು ಮತ್ತು ಸಾಂಸ್ಕೃತಿಕ ಏರುಪೇರುಗಳು ಆಯಾ ಕಾಲದ ಚಿಂತಕರನ್ನೂ, ಅವರ ಚಿಂತನೆಗಳನ್ನೂ ನಿಯಂತ್ರಿಸಿವೆ. ಅಂಥ ಚಿಂತನೆಗಳ ಒತ್ತಡವೇನು, ಅವುಗಳ ಸ್ವರೂಪವೇನು, ಮತ್ತು ಅವುಗಳು ತಲುಪಿರುವ ನಿರ್ಣಯಗಳು ಯಾವುವು – ಎಂಬವುಗಳನ್ನು ಗಮನಿಸುವುದರಿಂದ ಈ ಚಿಂತನೆಗಳಲ್ಲಿ ಕಾಲ,ಪರಿಸ್ಥಿತಿಗಳು ಹಾಗೂ ಮೌಲ್ಯಗಳ ನಿಯಂತ್ರಣ ಯಾವ ಬಗೆಯದು – ಎಂಬುದನ್ನು ಅರಿತುಕೊಳ್ಳಬಹುದು.

ಈ ಶತಮಾನದ ಆರಂಭದ ಚಿಂತನೆಗಳಲ್ಲಿ ಬಿ.ಎಂ.ಶ್ರೀ., ಆಲೂರು ವೆಂಕಟರಾಯರು – ಇವರಿಬ್ಬರ ಚಿಂತನೆಗಳಲ್ಲಿ ಬಹಳಷ್ಟು ವ್ಯತ್ಯಾಸವಿದೆ. ಒಬ್ಬರಲ್ಲಿ ಆಧುನಿಕತೆ ಮತ್ತು ನಾಡಭಕ್ತಿ ಮೇಳಗೊಂಡಿದ್ದರೆ, ಇನ್ನೊಬ್ಬರಲ್ಲಿ ಸ್ವಾತಂತ್ರ್ಯ ಚಳವಳಿ, ಸಾಂಸ್ಕೃತಿಕ ಪುನರುಜ್ಜೀವನದ ತುಡಿತಗಳು 'ಕರ್ನಾಟಕತ್ವ'ವನ್ನು ರೂಪಿಸಿದೆ. ಆದ್ದರಿಂದ ಒಬ್ಬರ ದೃಷ್ಟಿಯಲ್ಲಿ ಇಂಗ್ಲಿಷ್, ಕನ್ನಡ – ಎರಡರ ಸಮನ್ವಯ, ಇನ್ನೊಬ್ಬರಲ್ಲಿ ಇಂಗ್ಲಿಷ್ ವಿರೋಧದ ಮೂಲಕ ಕನ್ನಡದ ಉನ್ನತಿ ಕಂಡುಬಂದಿದೆ. ಇದೇ ರೀತಿಯಲ್ಲಿ ಇಂಗ್ಲಿಷನ್ನು ನಿರಾಕರಿಸಿ, ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಸ್ವೀಕರಿಸುವ (ಮುಖ್ಯವಾಗಿ ರಂ.ರಾ. ದಿವಾಕರ, ಮುದವೀಡು) ಚಿಂತಕರಲ್ಲಿ ಮತ್ತು ಹಿಂದಿಗಿಂತ ಇಂಗ್ಲಿಷ್ ಭಾಷೆಯೇ ಉಪಯುಕ್ತ ಎಂದು ಹಿಂದಿಯನ್ನು ಸ್ವೀಕರಿಸದ ಚಿಂತಕರಲ್ಲಿಯೂ ಆ ಕಾಲದ ಸೂಕ್ಷ್ಮ ನಿಯಂತ್ರಣವನ್ನು ಕಾಣಬಹುದು. ಇಲ್ಲಿ ಮೊದಲನೆಯವರು ಇಂಗ್ಲಿಷ್ ವಿರೋಧಿಗಳೂ ಅಲ್ಲ; ಅನಂತರದವರು ಹಿಂದೀ ವಿರೋಧಿಗಳೂ ಅಲ್ಲ. ಆದ್ದರಿಂದ ಇವರನ್ನು ಇಂಗ್ಲಿಷ್ (ಎಂದರೆ ಬ್ರಿಟಿಷರ)ಪರವಾಗಿದ್ದವರು, ಇಂಗ್ಲಿಷ್ ವಿರೋಧಿಯಾಗಿದ್ದವರು (ರಾಷ್ಟ್ರೀಯತೆಯುಳ್ಳವರು) – ಎಂದು ಸರಳವಾಗಿ ಭಾವಿಸಿಕೊಳ್ಳುವುದು ತಪ್ಪು. ಆ ಕಾಲದ ಮನೋಭಾವಗಳು ಆ ರೀತಿ ಇದ್ದಿರಬಹುದಾದರೂ

ಅವುಗಳ ತಾತ್ವಿಕ ನಿಲುವುಗಳು ಪ್ರಜ್ಞೆಯ ಮೂಲದಲ್ಲಿ ಈ ಚಿಂತಕರನ್ನು ಪ್ರಭಾವಿಸಿದ ಬಹುದಾದರೂ, ಅದನ್ನು ಮೀರಿ ಅವರು ಸ್ಥಿತಿಗಳನ್ನು ಪರಿಶೀಲಿಸಿರಲಿಲ್ಲವೆಂದು ಹೇಳ ಲಾಗದು. ಹೀಗಿದ್ದರೂ ಅವರ ಚಿಂತನೆಯ ನಿಯಂತ್ರಣ ಆ ಪ್ರಜ್ಞೆಯ ಮೂಲದಿಂದಲೇ ಬಂದಿರುತ್ತದೆ — ಎನ್ನುವುದು ಹೆಚ್ಚು ನಿಜ.

ಸ್ವಾತಂತ್ರ್ಯಾನಂತರ ಪರಿಸ್ಥಿತಿ ಹಾಗೂ ಮೌಲ್ಯಗಳು ಬದಲಾದರೂ, ಚಿಂತನೆಗಳ ಮೂಲಸ್ವಭಾವ ಬೇರೆ ಬೇರೆ ರೂಪದಲ್ಲಿ ವ್ಯಕ್ತವಾಯಿತಲ್ಲದೆ, ಮೊದಲಿಗಿಂತ ತೀರ ವ್ಯತ್ಯಸ್ತವಾಗಲಿಲ್ಲ. ಕೇಂದ್ರದಿಂದ ಹಿಂದೀ ಒತ್ತಡ, ಹಿಂದೀತರ ರಾಜ್ಯಗಳಿಂದ ಹಿಂದೀ ವಿರೋಧಿ ಹಾಗೂ ಇಂಗ್ಲಿಷ್ ಪರ ಒತ್ತಾಯ — ಇವುಗಳ ನಡುವಿನ ಸಂಘರ್ಷ — ಸಾಮ್ರಾಜ್ಯ ಶಾಹಿ ಮನೋಭಾವ ಮತ್ತು ಅಸ್ತಿತ್ವಕ್ಕಾಗಿ ಹೋರಾಡುವ ಮನಸ್ಥಿತಿಗಳ ನಡುವಿನ ಹೋರಾಟದ ಅಭಿವ್ಯಕ್ತಿಯೇ ಆಗಿದೆ. ಆದರೆ ಇದು ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತ ಚಿಂತನೆಗಿಂತ, ಹಿಂದಿ–ಕನ್ನಡ ಸಂಬಂಧದ ಕುರಿತ ಚಿಂತನೆಯನ್ನು ಹೆಚ್ಚು ನಿಯಂತ್ರಿಸಿದೆ. ಇಂಗ್ಲಿಷ್ —ಕನ್ನಡ ಸಂಬಂಧದ ವಿಷಯದಲ್ಲಿ ಮುಖ್ಯವಾಗಿ ಜಾಗತಿಕ ಮಟ್ಟದ ಒತ್ತಡವೂ, ರಾಜಕೀಯ ಜಡತ್ವದ ಮೂಲಕ ಅಧಿಕಾರ ಹಿಡಿದಿರುವ ವಸಾಹತುಶಾಹಿ ಒತ್ತಡವೂ ಚಿಂತನೆ ಗಳನ್ನು ನಿಯಂತ್ರಿಸಿವೆ. ಆದರೆ ಕನ್ನಡದ ನೆಲೆಯಿಂದ ಬಂದ, ಕನ್ನಡದ ಏಳಿಗೆಯನ್ನು ಒತ್ತಾಯಿಸುವ ಚಿಂತನೆಗಳಲ್ಲಿ ಎರಡನೇ ಬಗೆಯ (ವಸಾಹತುಶಾಹಿ ಒತ್ತಡ) ನಿಯಂತ್ರಣ ಕಡಿಮೆಯೆಂದೇ ಹೇಳಬೇಕು. ಅದಕ್ಕೆ ವಿರುದ್ಧವಾಗಿ — ಇಂಗ್ಲಿಷ್ ಭಾಷೆಯನ್ನು ಸ್ವೀಕರಿಸುವ, ಚೆನ್ನಾಗಿ ಉಪಯೋಗಿಸಿಕೊಳ್ಳುವ ಮೂಲಕ ಕನ್ನಡಭಾಷೆ ಬೆಳೆದು ತಲೆಯೆತ್ತಿ ನಿಲ್ಲಬಲ್ಲ ಸಾಧ್ಯತೆಯ ಕುರಿತು — ಅದರ ಜಾಗತಿಕ ಮಟ್ಟದ ಒತ್ತಡದಿಂದ, ವಸಾಹತುಶಾಹಿ ಒತ್ತಡವನ್ನು ಮೆಟ್ಟಿ ನಿಲ್ಲಬಲ್ಲ ಚಿಂತನೆ ರೂಪುಗೊಂಡದ್ದು ಗಮನಾರ್ಹ. (ಅಡಿಗ, ಅನಂತಮೂರ್ತಿ, ಕಾರಂತ, ಮೂರ್ತಿರಾವ್, ಮೊದಲಾದವರಲ್ಲಿ.) ಇಲ್ಲಿ ಪರಿಸ್ಥಿತಿಯಿಂದ ನಿಯಂತ್ರಿತವಾಗುವ ಬದಲು, ಆ ನಿಯಂತ್ರಣಕ್ಕೆ ಸವಾಲಾಗಿ ನಿಲ್ಲುವ ಸ್ವಭಾವವನ್ನು ಗುರುತಿಸಬಹುದು.

ಕುವೆಂಪು, ಪು.ತಿ.ನ., ಹಾಮಾನಾ, ಚಿದಾನಂದಮೂರ್ತಿ, ಪಾಟೀಲ ಪುಟ್ಟಪ್ಪ — ಮೊದಲಾದವರ ಚಿಂತನೆಗಳು ಕಾಲದ ಪರಿಸ್ಥಿತಿಗಳಿಗೆ ಪ್ರತಿಕ್ರಿಯೆಯಾಗಿ ಮೂಡಿಬಂದಿರುವುದರಿಂದ, ಅವು ಒಂದು ರೀತಿಯಲ್ಲಿ ಕಾಲನಿಯಂತ್ರಿತವೇ ಆಗಿದ್ದರೂ, ಬಹುಪಾಲು ಪ್ರಸ್ತುತತೆಯನ್ನು ಕಳೆದುಕೊಳ್ಳದೆ ನಿಲ್ಲುತ್ತವೆ. ಇವರ ಚಿಂತನೆಗಳು ಅಸ್ತಿತ್ವಹೋರಾಟದ, ಕನ್ನಡ ಕೇಂದ್ರಿತ

ತಾತ್ವಿಕತೆಯು ಮೂಲದಿಂದ ಹೊರಟಿರುವುದರಿಂದ, ಸಮಸ್ಯೆಗಳು ಬದಲಾಗುತ್ತ ಹೋದಂತೆಲ್ಲ ಅವರ ಕಾಲ, ಪರಿಸ್ಥಿತಿಬದ್ಧ ಚಿಂತನೆಗಳು ಬೇರೆ ಬೇರೆ ರೀತಿಯಲ್ಲಿ ಅನ್ವಯವಾಗುತ್ತ, ಪ್ರಸ್ತುತವಾಗುತ್ತವೆ — ಎನ್ನಬಹುದು.

ಇತ್ತೀಚೆಗೆ ಗೋಕಾಕ್ ಚಳವಳಿ ಹಾಗೂ ಇನ್ನಿತರ ಕನ್ನಡ ಚಳವಳಿಗಳ ನಂತರ ಕೇವಲ ಘೋಷಣೆ ಹಾಗೂ ಅಭಿಮಾನದ ಭಾವುಕ ಭಾಷಣಗಳಾಗಿ ವ್ಯಕ್ತಗೊಳ್ಳುವ ಅನೇಕ ಅಭಿಪ್ರಾಯಗಳನ್ನು 'ಚಿಂತನೆ' ಯ ವ್ಯಾಪ್ತಿಯೊಳಗೆ ತರುವುದು ಅಶಕ್ಯವೆನ್ನಿಸಿದೆ. ಏಕೆಂದರೆ, ಅವು ಒಂದಲ್ಲ ಒಂದು ಮುಖ್ಯ ಚಿಂತನೆಯಿಂದ ಎರವಲು ಪಡೆದ ವಿಷಯಗಳೇ ಆಗಿರುತ್ತವೆ. ಈ ದೃಷ್ಟಿಯಿಂದ ಮಾತ್ರ 'ಚಿಂತನೆ' ಯನ್ನು ಇವುಗಳಿಂದ ಪ್ರತ್ಯೇಕವಾಗಿ ಗಮನಿಸಬೇಕೇ ಹೊರತು ಅವು 'ಚಿಂತನೆ' ಗಿಂತ ಬೇರೆಯೇ ಆದವುಗಳು ಎಂದು ತಿಳಿಯುವ ಹಾಗಿಲ್ಲ.

<u>ನಿಯಂತ್ರಣಗಳನ್ನು ಮೀರುವ ಚಿಂತನೆಗಳು:</u> ಚಿಂತನೆಗಳು ಕಾಲಬದ್ಧವಾಗಿರುವುದರಿಂದ, ಪರಿವರ್ತನೆ ಹೊಂದುತ್ತಲೇ ಇರುವ ಸನ್ನಿವೇಶಗಳಲ್ಲಿ ಇವುಗಳ ಪರಿಶೀಲನೆ ನಿರುಪಯುಕ್ತವಾಗದೆ? ಎಂಬ ಪ್ರಶ್ನೆ ಉದಿಸುತ್ತದೆ. ಇಲ್ಲಿ ಇದಕ್ಕೆ ಉತ್ತರವನ್ನು ಕಂಡುಕೊಳ್ಳಲು ಯತ್ನಿಸಬಹುದು.

ಕಾಲಬದ್ಧ ಹಾಗೂ ಸನ್ನಿವೇಶ ನಿಯಂತ್ರಿತ ಚಿಂತನೆಗಳನ್ನು ಆ ಸಂದರ್ಭದಿಂದ ಪ್ರತ್ಯೇಕಿಸಿ ನೋಡುವಾಗ ಅದರ ಮೌಲ್ಯ ಅಥವಾ 'ಅನ್ವಯಿಕತೆ' ಕಳೆದುಹೋಗುತ್ತದೆ ಎಂದೇನೂ ಹೇಳುವಂತಿಲ್ಲ. ಸಂದರ್ಭಗಳು ಹೇಗೆ ಒಂದೊಂದೂ ವಿಶಿಷ್ಟವಾದವುಗಳೋ, ಹಾಗೆಯೇ ಬೇರೆ ಬಗೆಯಲ್ಲಿ ಪುನಃ ಪುನಃ ಆವರ್ತಿಸುವ ಲಕ್ಷಣವನ್ನೂ ಹೊಂದಿವೆ. ಆದ್ದರಿಂದ, ಒಂದೇ ಒಂದು ಸಂದರ್ಭಕ್ಕೆ ವಿಶಿಷ್ಟವಾದ ಚಿಂತನೆ ಇದೆ ಅಥವಾ ಇತ್ತು — ಎನ್ನುವುದು ಸಾಧ್ಯವಿಲ್ಲ. ಸಂದರ್ಭಗಳು ಹಾಗೂ ಸಮಸ್ಯೆಗಳು ಬೇರೆ ಬೇರೆ ಕಾಲದಲ್ಲಿ ಭಿನ್ನವಾಗಿದ್ದರೂ, ಅವುಗಳ ಹಿಂದಿರುವ ನಿಯಮವು ಒಂದೇ ಆಗಿರುವುದು ಸಹಜವಾದ್ದರಿಂದ, ಆಯಾ ಕಾಲದ ಚಿಂತನೆಗಳೂ ಆ ನಿಯಮಕ್ಕನುಗುಣವಾಗಿ ಒಂದೊಂದು ಬಗೆಯಲ್ಲಿ ಸಮಸ್ಯೆಗಳ ಪರಿಹಾರ ಮಾರ್ಗವನ್ನು ಕಂಡುಹಿಡಿಯುವುದು ಸಹಜ. ಉದಾಹರಣೆಗೆ, ಸ್ವಾತಂತ್ರ್ಯ ಲಭಿಸುವ ಮೊದಲು ಮತ್ತು ಲಭಿಸಿದ ನಂತರದ ಕೆಲವು ವರ್ಷಗಳಲ್ಲಿ ರಾಷ್ಟ್ರಭಾಷೆಯೊಂದರ ಅಗತ್ಯದ ಕುರಿತು ಕನ್ನಡ ಚಿಂತಕರಲ್ಲಿ ಮೂಡಿಬಂದ ಚಿಂತನೆಗಳು ಉಳಿದ ಸಂದರ್ಭಗಳಲ್ಲಿ ಅಷ್ಟಾಗಿ ಮೂಡಿಬರಲಿಲ್ಲ. ಅನೇಕ ವೇಳೆ ಅದಕ್ಕೆ ಪ್ರಬಲ ವಿರೋಧವೂ, ತಾತ್ವಿಕ ನಿರಾಕರಣೆಯೂ ವ್ಯಕ್ತವಾಗಿದ್ದವು.

ಆದರೆ ಅದೇ ರಾಷ್ಟ್ರೀಯ ಏಕತೆ, ಪ್ರಾಂತ – ಪ್ರಾಂತಗಳ ಹಾಗೂ ಪ್ರಾಂತ – ಕೇಂದ್ರದ ಸಂಪರ್ಕ ಭಾಷೆ – ಇವುಗಳ ಅಗತ್ಯದ ಕುರಿತು ಎಲ್ಲ ಕಾಲಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಚಿಂತನೆ ನಡೆದಿರುತ್ತದೆ. ಬೇರೆ ಬೇರೆ ಕಾಲಘಟ್ಟಗಳಲ್ಲಿ ಒಂದೇ ವಿಷಯದ ಕುರಿತ ಚಿಂತನೆಗಳಲ್ಲಿ ಅತ್ಯಂತ ವೈರುಧ್ಯವಾ ಭಿನ್ನತೆಯೂ ಇರುವುದು ಸಹಜ; ಆದರೆ ಅವುಗಳ ಮೂಲಸಮಸ್ಯೆ ಹಾಗೂ ಅತಿಹೆಚ್ಚು ಸಮರ್ಪಕವಾದ ಪರಿಹಾರೋಪಾಯ, ಆ ಎಲ್ಲ ಕಾಲಗಳಲ್ಲೂ ಒಂದೇ ಆಗಿರುತ್ತವೆ. ಭಿನ್ನ ಭಿನ್ನ ಚಿಂತನೆಗಳಿಗೆ ವ್ಯಕ್ತಿಗಳೂ ಮುಖ್ಯ ಕಾರಣರಾಗಿರುತ್ತಾರೆ ಎನ್ನುವುದೂ ಕಾಲ, ಪರಿಸ್ಥಿತಿಗಳಷ್ಟೇ ಮುಖ್ಯವಾಗಿದೆ. ಸಂದರ್ಭ ಹಾಗೂ ಅದಕ್ಕೆ ಸಮಾಜವು ( = ವ್ಯಕ್ತಿಗಳು) ವ್ಯಕ್ತಪಡಿಸುವ ಪ್ರತಿ–ಕ್ರಿಯೆಯಲ್ಲಿರುವ ಹಲವು ಸಾಧ್ಯತೆಗಳು ಸಮಸ್ಯೆಯನ್ನು ಜಟಿಲಗೊಳಿಸುತ್ತವೆ; ಪರಿಹಾರ ಮಾರ್ಗದಲ್ಲಿ ಗೊಂದಲಗಳನ್ನು ಸೃಷ್ಟಿಸುತ್ತವೆ. ಈ ಗೊಂದಲಗಳನ್ನೂ, ಸಮಸ್ಯೆಗಳ ವಾಸ್ತವ ಸ್ವರೂಪಗಳನ್ನೂ, ಅವುಗಳಿಗೆ ಯೋಗ್ಯ ಪರಿಹಾರಗಳನ್ನೂ ಕಂಡುಕೊಳ್ಳುವುದಕ್ಕೆ ಚಾರಿತ್ರಿಕ ದೃಷ್ಟಿಯಿಂದ ಅಥವಾ ಚಿಂತನೆಗಳನ್ನು ಪರಸ್ಪರ ಹೋಲಿಸುವ ಮೂಲಕ ನಡೆಸುವ ವಿಶ್ಲೇಷಣೆಯಿಂದ ಕಂಡುಕೊಂಡ ಕೆಲವು ಅಂಶಗಳು ಉಪಯುಕ್ತವಾಗಬಲ್ಲವು ಎಂಬುದು ನಿಸ್ಸಂದೇಹವಾದ ಸಂಗತಿಯಾಗಿದೆ. ಈ ಅಧ್ಯಯನದಲ್ಲಿ ಹಾಗೆ ಕಂಡು ಬಂದ ಅಂಶಗಳನ್ನು ಕೊನೆಯದಾಗಿ ನಿರೂಪಿಸುವುದು ಅವಶ್ಯಕವಾಗಿದೆ.

1. ಒಂದು ನಾಡಿನ ಭಾಷೆಗೆ ಅನ್ಯ ಭಾಷೆಯ ಸಂಪರ್ಕವುಂಟಾದಾಗ ಎರಡೂ ಭಾಷೆಗಳ ನಡುವೆ ಸಂಘರ್ಷ ಅನಿವಾರ್ಯ. ಆಗ ಎರಡು ಸಾಧ್ಯತೆಗಳಿವೆ: ಅ) ಸ್ಥಳೀಯ ಭಾಷೆ ಸಂಪರ್ಕಕ್ಕೆ ಮುಖಾಮುಖಿಯಾಗಿ ಅನ್ಯಭಾಷೆಯನ್ನು ಅರಗಿಸಿಕೊಳ್ಳುವುದು; ಆ ಮೂಲಕ ಅದು ಬೆಳೆಯುವುದು. ಆ) ಅನ್ಯಭಾಷೆ ಸ್ಥಳೀಯ ಭಾಷೆಯ ಮೇಲೆ ಪ್ರಭುತ್ವ ಸ್ಥಾಪಿಸಿಕೊಳ್ಳುವುದು. ಈ ಎರಡೂ ಸಾಧ್ಯತೆಗಳಲ್ಲಿ, ಸ್ಥಳೀಯ ಭಾಷೆಯ ಸಮಾಜದಲ್ಲಿ ಮೂರು ರೀತಿಯ ನಿಲುವುಗಳು ಮೂಡಿಬರುವುದು ಸಹಜ:

1) ಅನ್ಯಭಾಷೆ ಬೇಡವೇ ಬೇಡ; ಅದು ಸ್ಥಳೀಯ ಭಾಷೆಗೆ ಮಾರಕ; ಅದನ್ನು ಅಟ್ಟಿಬಡಬೇಕು.

2) ಸ್ಥಳೀಯ ಭಾಷೆ ನಿರುಪಯುಕ್ತ ಹಾಗೂ ಅದರಿಂದ ಏನೂ ಸಾಧ್ಯವಾಗದು. ಆದ್ದರಿಂದ ಅನ್ಯಭಾಷೆಯನ್ನೇ ಆಶ್ರಯಿಸಬೇಕು.

3) ಎರಡೂ ಭಾಷೆಗಳು ನಾಡಿನ ಬೆಳವಣಿಗೆಗೆ, ಭಾಷೆಯ ಬೆಳವಣಿಗೆಗೆ ಬಹಳ ಮುಖ್ಯ. ಸ್ಥಳೀಯ ಭಾಷೆಗೆ ಬಾಧೆ ತಟ್ಟದಂತೆ ಅನ್ಯಭಾಷೆಯನ್ನು ಸ್ವೀಕರಿಸಬೇಕು. ಆದರೆ ಎಲ್ಲರ ಗುರಿ ಸ್ಥಳೀಯ ಭಾಷೆಯ ಬೆಳವಣಿಗೆಯೇ ಆಗಿರಬೇಕು.

ಈ ಮೂರು ನಿಲುವುಗಳು ಸ್ವಾತಂತ್ರ್ಯಪೂರ್ವದಲ್ಲೂ, ಸ್ವಾತಂತ್ರ್ಯನಂತರವೂ, ಈಚಿನ ದಿನಗಳಲ್ಲೂ ಬೇರೆ ಬೇರೆ ರೂಪ ತಾಳಿ ಕಾಣಿಸಿಕೊಂಡಿವೆ. ಆರಂಭದಲ್ಲಿ ಕನ್ನಡ ಬೆಳವಣಿಗೆಯ ಸಂದರ್ಭದಲ್ಲೂ, ಅನಂತರ 'ಹಿಂದೀ ರಾಷ್ಟ್ರೀಯತೆ' ಹಾಗೂ ಹಿಂದೀ ವಿರೋಧದ ಕಾಲದಲ್ಲೂ, ಇತ್ತೀಚೆಗೆ ಇಂಗ್ಲಿಷ್ ಮಾಧ್ಯಮ ಶಿಕ್ಷಣದ ಸಮಸ್ಯೆಯ ಸಂದರ್ಭದಲ್ಲೂ ಇದೇ ಬಗೆಯ ಮೂರು ನಿಲುವುಗಳು ವ್ಯಕ್ತಗೊಂಡಿವೆ. ಇವುಗಳ ಹಿಂದಿರುವ ಮುಖ್ಯ ಮನೋಭಾವಗಳು ಇವು: ಸ್ವಾವಲಂಬನೆ, ಪರಾವಲಂಬನೆ ಹಾಗೂ ಸಮನ್ವಯ. ಇವುಗಳಲ್ಲಿ ಮೊದಲ ಎರಡು ಮನೋಭಾವಗಳಿಗೂ ಅವುಗಳದ್ದೇ ಆದ ಮಿತಿಗಳಿವೆಯಾದ್ದರಿಂದ ಅವುಗಳಿಗೆ ಪ್ರಾಧಾನ್ಯವಿರುವ ಕಾಲದಲ್ಲಿ ಭಾಷೆಯ ನಿಜವಾದ ಬೆಳವಣಿಗೆಯಾದುದು ಚರಿತ್ರೆಯಲ್ಲಿ ಕಂಡುಬರುವುದಿಲ್ಲ. ಮೂರನೇ ಮನೋಭಾವಕ್ಕೆ ಪ್ರಾಧಾನ್ಯ ದೊರಕಿದಾಗಲೆಲ್ಲ ಹೊಸ ಸೃಷ್ಟಿಯಾದುದು ಕಂಡುಬರುತ್ತದೆ. (ಸ್ವಾತಂತ್ರ್ಯ, ಏಕೀಕರಣ ಚಳವಳಿಗೆ ಪೂರ್ವದಲ್ಲಿ ಉಂಟಾದ ಭಾಷಾಬೆಳವಣಿಗೆ; ಸ್ವಾತಂತ್ರ್ಯದ ಬಳಿಕ ಉಂಟಾದ ಭಾಷಾಗೊಂದಲ, ಸಮಸ್ಯೆಗಳು; ಹಾಗೂ ಅನಂತರ ಉಂಟಾದ ದಾಸ್ಯ ಇವು ಆರಂಭದ ಸಮನ್ವಯವನ್ನೂ, ಅನಂತರದ ಸ್ವಾವಲಂಬನೆಯ ಉತ್ಸಾಹವನ್ನೂ, ಮುಂದಿನ ಪರಾವಲಂಬೀ ವಾಸ್ತವವನ್ನೂ ತೋರಿಸಿ ಕೊಡುತ್ತವೆ.) ಇದರಿಂದ ಮೂರನೇ ನಿಲುವೇ ಹೆಚ್ಚು ವಿವೇಕಯುತವಾದದ್ದು — ಎನ್ನಬಹುದು.

2. ಇಂಥ ನಿಲುವನ್ನು ದೂರದೃಷ್ಟಿಯ ವಿಶ್ಲೇಷಣೆಗಳಿಂದ ಖಚಿತಪಡಿಸಿಕೊಳ್ಳದಿದ್ದರೆ ಉಂಟಾಗುವ ಪರಿಣಾಮಗಳನ್ನು ಅಂತೂ ಕಾಲದ ಏರುಪೇರುಗಳಿಂದ ಕಂಡುಕೊಳ್ಳಬಹುದು. ಹಿಂದಿ, ಇಂಗ್ಲಿಷ್, ಕನ್ನಡ — ಈ ಮೂರು ಭಾಷೆಗಳ ನಡುವಿನ ಸಂಬಂಧವನ್ನೂ, ಅವುಗಳಿಗಿರಬೇಕಾದ ಸ್ಥಾನಮಾನಗಳನ್ನೂ ಗುರುತಿಸಿಕೊಳ್ಳದ್ದರಿಂದ ಭಾಷಿಕ ಅಸಮಾನತೆ, ಹೇರಿಕೆ, ಭಾಷಾದ್ವೇಷ, ಪ್ರತ್ಯೇಕತಾವಾದ — ಈ ಸಮಸ್ಯೆಗಳೆಲ್ಲ ಉದ್ಭವಿಸಿದವು. ಆಡಳಿತ, ಶಿಕ್ಷಣದಲ್ಲಿ ಸಮರ್ಪಕವಾದ ಭಾಷಾನೀತಿಯನ್ನು ರೂಪಿಸಿಕೊಳ್ಳದ್ದರಿಂದ ನಾಡಿನ ಬೆಳವಣಿಗೆ, ಅಭಿವೃದ್ಧಿಯಲ್ಲಿ ಗಣನೀಯ ಪ್ರಮಾಣದ ಕುಸಿತವುಂಟಾಯಿತು. ಶಿಕ್ಷಣ ಮಾಧ್ಯಮ ಮತ್ತು

ಭಾಷೆಯ ಕಲಿಕೆಯ ಕುರಿತ ಗೊಂದಲ ಇಂಗ್ಲಿಷ್ ಮಾಧ್ಯಮ ಶಿಕ್ಷಣದ ಸಮಸ್ಯೆಯನ್ನು ಉಂಟುಮಾಡಿತು. ಇವುಗಳೊಂದಿಗೆ ಭಾಷಾಸಮಸ್ಯೆಗಳು ಮತ್ತು ಭಾಷಾಸಂಬಂಧಗಳ ಕುರಿತು ವಸ್ತುನಿಷ್ಠ ಸಂಗತಿಗಳನ್ನೂ, ಯೋಗ್ಯಧೋರಣೆಗಳನ್ನೂ ಜನರು ಬೆಳೆಸಿಕೊಳ್ಳುವಂತೆ ಮಾಡದುದರಿಂದ ಗೋಕಾಕ್ ವರದಿಯಂಥಹ ಅತ್ಯಂತ ಸಮರ್ಪಕವಾದ ಭಾಷಾನೀತಿಯ ಅನುಷ್ಠಾನಕ್ಕೂ ಕರ್ನಾಟಕದಲ್ಲಿ ವಿರೋಧ ಕಂಡುಬಂತು.

3. ಭಾಷಾನೀತಿಯನ್ನು ರೂಪಿಸುವಲ್ಲಿ ಮುಖ್ಯ ಸಮಸ್ಯೆಗಳನ್ನು ಹೇಗೆ ಪ್ರಧಾನವಾಗಿ ಪರಿಗಣಿಸಬೇಕೋ, ಹಾಗೆಯೇ ಅಮುಖ್ಯವಾದ ಸಮಸ್ಯೆಗಳಿಗೂ ಅಷ್ಟೇ ಗಮನ ಕೊಡಬೇಕು. ಇಲ್ಲವಾದರೆ ಆ ಸಮಸ್ಯೆಗಳು ನಿಧಾನವಾಗಿ ಬೆಳೆಯುತ್ತ ಪ್ರಧಾನ ಸಮಸ್ಯೆಗಳೇ ಆಗುತ್ತವೆ. ಇದಕ್ಕೆ ಸ್ಪಷ್ಟದಾಖಲೆ — ಇಂಗ್ಲಿಷ್ ಮಾಧ್ಯಮ ಶಾಲೆಗಳು ಮತ್ತು ಅನ್ಯಭಾಷಾವಲಸಿಗರು ಸೃಷ್ಟಿಸುವ ಭಾಷಾಸಮಸ್ಯೆಗಳು.

ಭಾಷೆಗೆ ಸಂಬಂಧಿಸಿದ ಎಲ್ಲ ಸಮಸ್ಯೆಗಳನ್ನೂ ಸಮಗ್ರವಾಗಿ ಪರಿಶೀಲಿಸಿದ ಗೋಕಾಕ್ ಸಮಿತಿ ವರದಿ ಈ ದೃಷ್ಟಿಯಿಂದ ಅತ್ಯಂತ ಸಮರ್ಪಕವೆನಿಸುತ್ತದೆ. ಮುಖ್ಯವಾಗಿ ಶಿಕ್ಷಣವನ್ನು ದೃಷ್ಟಿಯಲ್ಲಿಟ್ಟುಕೊಂಡು ತಯಾರಿಸಿದ ಈ ವರದಿ, ಕನ್ನಡದ ಎಲ್ಲ ಸಮಸ್ಯೆಗಳನೂ ಗಮನದಲ್ಲಿರಿಸಿಕೊಂಡು ಭಾಷಾನೀತಿಯನ್ನು ತಯಾರಿಸಿದೆ. ಆದರೆ ಶಿಕ್ಷಣವೊಂದೇ ಭಾಷಾ ಸಮಸ್ಯೆಗಳನ್ನು ಪರಿಹರಿಸುವುದಿಲ್ಲವಾದ್ದರಿಂದ ಒಟ್ಟು ರಾಜ್ಯವ್ಯವಸ್ಥೆಯಲ್ಲಿಯೇ, — ಎಲ್ಲ ಕ್ಷೇತ್ರಗಳಿಗೂ ಅನ್ವಯವಾಗಬಲ್ಲ — ಭಾಷಾನೀತಿಯೊಂದು ರೂಪುಗೊಳ್ಳುವುದು ಮತ್ತು ಅದರ ಅನುಷ್ಠಾನವಾಗುವುದು ಅತ್ಯಂತ ಅಗತ್ಯವಾಗಿದೆ.

ಕನ್ನಡ ಚಿಂತಕರ ಇಂಗ್ಲಿಷ್ — ಕನ್ನಡ ಸಂಬಂಧದ ಕುರಿತ ಚಿಂತನೆಯನ್ನು ಅಭ್ಯಸಿಸಿದ ಹಿನ್ನೆಲೆಯಲ್ಲಿ ಇಷ್ಟನ್ನು ಹೇಳಬಹುದು: ಕನ್ನಡ ಬೆಳೆಯುವುದರಿಂದಲೇ ಅದರ ಅಸ್ತಿತ್ವ ಭದ್ರವಾಗಿ ನಿಲ್ಲಬಲ್ಲದು. ಈ ಕಾರಣದಿಂದ, ಕನ್ನಡವನ್ನು ರಕ್ಷಿಸುವುದೆಂದರೆ, ಅದನ್ನು ಯೋಗ್ಯರೀತಿಯಲ್ಲಿ ಬೆಳೆಸುವುದೇ ಆಗಿದೆ. ಇಂಗ್ಲಿಷಿನಿಂದ ಹಾನಿಯಿದೆ ಎಂದು ಅದನ್ನು ಅಟ್ಟಿದರೆ ಕನ್ನಡ ಬೆಳೆಯಲಾರದು; ಬೆಳೆಯದೆ ಅದರ ಪರಾವಲಂಬನೆ ನಿಲ್ಲಲಾರದು. ಆದ್ದರಿಂದ, ಕನ್ನಡ ಬೆಳೆಯಲು ಇಂಗ್ಲಿಷ್ — ಕನ್ನಡ ಎರಡೂ ಭಾಷೆಗಳ ನಡುವೆ 'ಸಂಬಂಧ' ದ ಮಿತಿಯನ್ನು ಮೀರದ ಸಮನ್ವಯವುಂಟಾಗಬೇಕು. ಆಗ ಅದು ನಿಜವಾದ 'ಸಂಬಂಧ' ವೆನಿಸಬಹುದು.

ಅನ್ಯಭಾಷೆಯಿಂದ ಅಪಾಯಗಳನ್ನು ಎದುರಿಸುವ ಸಾಮರ್ಥ್ಯ ಬರುವುದೂ ಇಂಥ ಸಂಬಂಧ ಬಲಗೊಳ್ಳುವುದರಿಂದಲೇ ಆಗಿದೆ.

o o o o

## ಸಹಾಯಕ ಗ್ರಂಥಗಳು


ಅನಂತಮೂರ್ತಿ, ಯು.ಆರ್. : ಪ್ರಜ್ಞೆ ಮತ್ತು ಪರಿಸರ (1971), ಅಕ್ಷರ ಪ್ರಕಾಶನ, ಹೆಗ್ಗೋಡು.

ಅನಂತಮೂರ್ತಿ, ಯು.ಆರ್. : ಕನ್ನಡದ ಹಿತ (1991), ಅಕ್ಷರ ಪ್ರಕಾಶನ, ಹೆಗ್ಗೋಡು.

ಆಲೂರು ವೆಂಕಟರಾಯರು : ನನ್ನ ಜೀವನ ಸ್ಮೃತಿಗಳು (1974 – ದ್ವಿತೀಯ ಮುದ್ರಣ.) ಮನೋಹರ ಗ್ರಂಥಮಾಲಾ, ಧಾರವಾಡ.

ಎಚ್ಚೆಸ್ಕೆ : ಭಾರತದ ಭಾಷಾಸಮಸ್ಯೆ (1973), ಗಾಂಧೀಭವನ, ಮಾನಸ ಗಂಗೋತ್ರಿ, ಮೈಸೂರು.

ಕನ್ನಡ ಸಾಹಿತ್ಯ ಪರಿಷತ್ತು : ಭಾಷಾ ಸಮಿತಿಯ ವರದಿ (ಡಾ.ಗೋಕಾಕ್ ಸಮಿತಿ ವರದಿ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕುಲಕರ್ಣಿ, ವಿ.ಎಸ್. : ಭಾರತದಲ್ಲಿ ಶೈಕ್ಷಣಿಕ ಪ್ರಯೋಗ (1968), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಕುವೆಂಪು : ಷಷ್ಠಿನಮನ (1964) ಉದಯರವಿ ಪ್ರಕಾಶನ, ಮೈಸೂರು.

ಕುವೆಂಪು : ವಿಚಾರಕ್ರಾಂತಿಗೆ ಆಹ್ವಾನ (1987), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕೃಷ್ಣಕುಮಾರ್, ಸಿ.ಪಿ. : ಕನ್ನಡದ ಕಾರಣ (1991), ಚಿತ್ರಭಾನು ಪ್ರಕಾಶನ, ಮೈಸೂರು

ಗೋಪಾಲಕೃಷ್ಣ ಅಡಿಗ : ಸಮಗ್ರ ಗದ್ಯ – ಸಂಪುಟ 1 (1977), ಸಾಕ್ಷಿ ಪ್ರಕಾಶನ, ಬೆಂಗಳೂರು.

ಚಿದಾನಂದಮೂರ್ತಿ, ಎಂ. : ಭಾಷಾವಿಜ್ಞಾನದ ಮೂಲತತ್ವಗಳು (1965), ಡಿ.ವಿ.ಕೆ. ಮೂರ್ತಿ – ಪ್ರಕಾಶಕರು – ಮೈಸೂರು.

ದೇಜಗೌ : (ಸಂ) ರಾಷ್ಟ್ರಕವಿ ಭಾಷಣಗಳು (1976), ಸಹ್ಯಾದ್ರಿ ಪ್ರಕಾಶನ, ಮೈಸೂರು.

ನರಸಿಂಹಯ್ಯ, ಎಚ್. : ತೆರೆದ ಮನ (1992), ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

ನಾಯಕ್, ಜೆ.ಪಿ. : ಶಿಕ್ಷಣ ಆಯೋಗ : ಪೂರ್ವೋತ್ತರ (ಅನು: ಮಹಾಬಲೇಶ್ವರ ರಾವ್, 1987) ಐಬಿಎಚ್ ಪ್ರಕಾಶನ, ಬೆಂಗಳೂರು.

ನಾಯಕ, ಹಾ.ಮಾ. : ಕನ್ನಡವನ್ನು ಕಟ್ಟುವ ಕೆಲಸ (1987), ಐಬಿಎಚ್ ಪ್ರಕಾಶನ, ಬೆಂಗಳೂರು.

ನಾಯಕ, ಹಾ.ಮಾ. : ಕನ್ನಡ ಮನಸ್ಸು (1991), ಬರ್ಲಿ ಬಿಂದು ಮಾಧವ ಸ್ಮಾರಕ ಪ್ರತಿಷ್ಠಾನ, ಹುಬ್ಬಳ್ಳಿ.

ನಾಯಕ, ಹಾ.ಮಾ. : (ಸಂ) ಶ್ರೀ ಸಾಹಿತ್ಯ (1983), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

ನಾಯಕ, ಹಾ.ಮಾ. : (ಸಂ) ಡಿ.ವಿ.ಜಿ. ಕೃತಿಶ್ರೇಣಿ, ಸಂಪುಟ 1 (1987), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಪಾಟೀಲ ಪುಟ್ಟಪ್ಪ : ಉಸಿರಾಗಲಿ ಕನ್ನಡ (1992), ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

ಮಾಲಿನಿ ಮಲ್ಯ, ಬಿ. : ಶಿವರಾಮ ಕಾರಂತರ ಲೇಖನಗಳು, ಸಂಪುಟ–2 (1994), ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಸಂಪಾದಕೀಯ – ಸಂಪುಟ 1, 2, 3, 4,5 (1967), ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು.

ಮುಗಳಿ, ರಂ.ಶ್ರೀ. : (ಸಂ) ಅಧ್ಯಕ್ಷರ ಭಾಷಣಗಳು, ಸಂಪುಟ – 1 (1970), ಸಂಪುಟ – 2, 3 (1972), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರಂಗನಾಥ ದಿವಾಕರ : ಕರ್ನಾಟಕ ಏಕೀಕರಣದ ಕಥೆ (1956), ಲೋಕ ಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ – ಬೆಂಗಳೂರು.

ವರದರಾಜ ಹುಯಿಲಗೋಳ (ನಿರ್ದೇಶಕ) : ಭಾರತದ ಗ್ಯಾಸೆಟಿಯರ್ – ಸಂಪುಟ 2, 4 (1987), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ವೆಂಕಟರಮಣನ್, ಡಿ.ಆರ್. : ವಿರಕ್ತ ರಾಷ್ಟ್ರಕ ಡಿ.ವಿ.ಜಿ. (1988), ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಬೆಂಗಳೂರು.

ಶೇಷಗಿರಿರಾವ್, ಎಲ್.ಎಸ್. : ಕನ್ನಡದ ಅಳಿವು – ಉಳಿವು (1985), ಕನ್ನಡ ಭಾಷೆಯ ಅಭಿವೃದ್ಧಿ ಸಮೀಕ್ಷಾ ಪ್ರಕಾಶನ, ಬೆಂಗಳೂರು.

ಶೇಷಗಿರಿರಾವ್, ಎಲ್.ಎಸ್. ; ಗೊ.ರು. ಚೆನ್ನಬಸಪ್ಪ ಮತ್ತು ರಾ.ನಂ. ಚಂದ್ರಶೇಖರ: ಕನ್ನಡ – ಕನ್ನಡಿಗ – ಕರ್ನಾಟಕ (1990), ಕನ್ನಡ ಶಕ್ತಿಕೇಂದ್ರ, ಬೆಂಗಳೂರು.

ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ (1974), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗ್ಯಾಜೆಟಿಯರ್ – ಭಾಗ 1, 3 (1984), ಕರ್ನಾಟಕ ರಾಜ್ಯ ಸರಕಾರ.

## ಪತ್ರಿಕೆಗಳು, ನಿಯತಕಾಲಿಕೆಗಳು

ಕನ್ನಡ ಪ್ರಭ, 5–6–1994 : 'ಭಾಷೆ ಮತ್ತು ಜ್ಞಾನ, ಎಲ್ಲಿಂದೆಲ್ಲಿಯ ಸಂಬಂಧ' – ಎ.ಓ. ಆವಲಮೂರ್ತಿಯವರ ಸಮೀಕ್ಷಾ ಲೇಖನ.

The Times of India, 15-6-1994 : An opinion poll on Medium of Instruction.

'ಸಿರಿಗನ್ನಡ' (ಅರ್ಧವಾರ್ಷಿಕ ಪತ್ರಿಕೆ, ಸಂ.1, ಸಂಚಿಕೆ 1–1993) : 'ಕನ್ನಡ – ಕೆಲವು ಆತಂಕಗಳು', ಡಾ. ಕೆ.ವಿ. ನಾರಾಯಣ ಅವರ ಲೇಖನ. ಸಂ: ಎಚ್.ಎಸ್. ರಾಘವೇಂದ್ರ ರಾವ್; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

'ಕನ್ನಡ ಅಧ್ಯಯನ' (ಅರ್ಧವಾರ್ಷಿಕ ಪತ್ರಿಕೆ, ಸಂ.1, ಸಂಚಿಕೆ 2 – ಜನವರಿ 1994) : ಸಂ: ಎಚ್.ಎಸ್. ರಾಘವೇಂದ್ರರಾವ್; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

